# ಮಹಾಮನೆ



ಸಂಪುಟ : ೭ ಮೇ ೨೦೦೫ ಸಂಚಿಕೆ : ೧೦ ಬೆಲೆ : ರೂ. ೧೦/-

## ಜವಳಿ ಚಿಕ್ಕವೀರಪ್ಪ ನಂಜಮ್ಮ ದತ್ತಿ ಕಾರ್ಯಕ್ರಮ

ವೇದಿಕೆಯಲ್ಲಿ : ಗೊ.ರು.ಚ., ಡಾ. ಸಿದ್ಧಲಿಂಗಯ್ಯ, ನಾಡೋಜ ಡಾ. ಪಾಟೀಲ ಪುಟ್ಟಪ್ಪ, ದತ್ತಿ ದಾನಿಗಳಾದ ಸಿ. ಸೋಮಶೇಖರ್ ದಂಪತಿಗಳು ಮತ್ತು ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ದಿಬ್ಬೂರು ಸಿದ್ಧಲಿಂಗಪ್ಪ

(ವರದಿ : ಪುಟ-೧೬)




ಒಕ್ಕಲು ಮುದ್ದಯ್ಯ



ಕರ್ನಾಟಕದ ಲಿಂಗಾಯತರು

ಯಾರು ನಿಜವಾದ ಸನ್ಯಾಸಿ



ಕಾಯಕ ತತ್ತ್ವ

## ಮನವಿ

### ಲೇಖಕರಲ್ಲಿ ಬಿನ್ನಹ

- ✤ 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ - ಸಂಸ್ಕೃತಿಗೆ ಸಂಬಂಧಿಸಿದ ಉಪಯುಕ್ತ ಲೇಖನಗಳನ್ನು ಪ್ರಕಟಿಸಲಾಗುತ್ತದೆ.
- ✤ ಶರಣ ಕ್ಷೇತ್ರ ಪರಿಚಯ, ಶರಣ ಸಾಹಿತಿಗಳ ಪರಿಚಯ, ಶರಣ ಸಾಹಿತ್ಯ ಕೃತಿಗಳ ಪರಿಚಯದ ಲೇಖನಗಳು 'ಮಹಾಮನೆ'ಯ ಎರಡು ಪುಟಗಳಿಗೆ ಮೀರಬಾರದು.
- ✤ ವಿಷಯ ವಿಶ್ಲೇಷಣೆ ಅಥವಾ ವ್ಯಾಖ್ಯಾನ ಸಂಬಂಧ ಲೇಖನಗಳು ಮುದ್ರಿತ ೩-೪ ಪುಟಗಳಿಗೆ ಮೀರಬಾರದು.
- ✤ ವಚನ ಸಾಹಿತ್ಯ ಅಥವಾ ಶರಣರ ಜೀವನವನ್ನು ಪ್ರತಿಬಿಂಬಿಸುವ ರೇಖಾ ಚಿತ್ರಗಳಿಗೆ ಅವಕಾಶವುಂಟು.
- ✤ ಶರಣ ಕ್ಷೇತ್ರ ಅಥವಾ ಶರಣ ಸಾಹಿತಿಗಳನ್ನು ಕುರಿತ ಲೇಖನಗಳೊಡನೆ ಸಂಬಂಧಪಟ್ಟ ಛಾಯಾಚಿತ್ರಗಳನ್ನು ಕಳುಹಿಸುವುದು ಅಪೇಕ್ಷಣೀಯ.
- ✤ ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಬೇಕು; ಅಕ್ಷರಗಳು ಸ್ಫುಟವಾಗಿರಬೇಕು.
- ✤ ಆಧುನಿಕ ವಚನಕಾರರು ತಮ್ಮ ಹೊಸ ವಚನಗಳನ್ನು ಪ್ರಕಟಣೆಗೆ ಕಳುಹಿಸಬಹುದು.

### ಅನುಭವ ಮಂಟಪ

- ✤ ಮಹಾಮನೆಯ ಈ ಅಂಕಣದಲ್ಲಿ ಪ್ರಶ್ನೋತ್ತರಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದೊಂದು ಮುಕ್ತ ವಿಚಾರ ವಿನಿಮಯ.
- ✤ ಪ್ರಶ್ನೆಗಳು ಗಂಭೀರವಾಗಿರಬೇಕು. ಮುಖ್ಯವಾಗಿ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿರಬೇಕು. ಪ್ರಶ್ನೆಗಳು ಸ್ಪಷ್ಟ ಹಾಗೂ ಸಂಕ್ಷಿಪ್ತವಾಗಿರಬೇಕು.
- ✤ ವೈಯಕ್ತಿಕ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಪ್ರಶ್ನೆಗಳಲ್ಲಿ ಸಾಮೂಹಿಕ ಹಿತದೃಷ್ಟಿಯಿರಬೇಕು.
- ✤ ವರ್ಷದ ಕೊನೆಯಲ್ಲಿ ಆಯ್ದ ಪ್ರಶ್ನೋತ್ತರಗಳಿಗೆ ಒಂದು ಸಂಗ್ರಹವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವಿದೆ.
- ✤ ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳಿಗೆ ಸಂಬಂಧಿಸಿದಂತೆಯೂ ಪ್ರಶ್ನೆಗಳನ್ನು ಕೇಳಬಹುದು.
- ✤ ಪ್ರಶ್ನೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆದು ಕಳುಹಿಸಿದರೆ ಸಾಕು. ಪ್ರಶ್ನೆ ಕೇಳುವವರು ತಮ್ಮ ಪೂರ್ಣ ಅಂಚೆ ವಿಳಾಸ ತಿಳಿಸಬೇಕು.

## ಗ್ರಂಥ ವಿಮರ್ಶೆ

- ✤ 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ ಮತ್ತು ಸಂಬಂಧಿಸಿದ ಹೊಸ ಪ್ರಕಟಣೆಗಳ ಸಾದರ ಸ್ವೀಕಾರಕ್ಕೆ ಅವಕಾಶವುಂಟು. ಅಂಕಣದ ಪ್ರಕಟಣೆಗೆ ಲೇಖಕರು / ಪ್ರಕಾಶಕರು ತಮ್ಮ ಕೃತಿಗಳ ಒಂದೊಂದು ಪ್ರತಿಯನ್ನು ಕಳುಹಿಸಬೇಕು.
- ✤ ವಿಮರ್ಶೆಗಾದರೆ ಪ್ರತಿಯೊಂದು ಕೃತಿಯ ಎರಡೆರಡು ಪ್ರತಿಗಳನ್ನು ಕಳುಹಿಸಬೇಕು. ಅಂತಹ ಕೃತಿಯ ಶೀರ್ಷಿಕಾ ಪುಟದಲ್ಲಿ "ವಿಮರ್ಶೆಯ ಕೃಪೆಗಾಗಿ" ಎಂದು ಬರೆದಿರಬೇಕು.

ವಿ.ಸೂ. ಲೇಖಕರು / ಪ್ರಕಾಶಕರು ಶರಣ ಸಾಹಿತ್ಯ ಪರಿಷತ್ತಿಗೆ ಕಳುಹಿಸುವ ಕೃತಿಗಳನ್ನು ಪರಿಷತ್ತಿನ ಸಾಹಿತ್ಯ ಭಂಡಾರದಲ್ಲಿಟ್ಟು ಓದುಗರಿಗೆ ಆಕರ ಸೌಲಭ್ಯ ಒದಗಿಸಲಾಗುತ್ತದೆ.

ಶರಣ ಸಾಹಿತ್ಯಕ್ಕೆ ಯಾವುದೇ ಕೃತಿಯನ್ನು (ಹಳೆಯದಿರಲಿ, ಹೊಸದಿರಲಿ, ಹಸ್ತಪ್ರತಿಯಿರಲಿ) ಕೊಡುಗೆಯಾಗಿ ಶರಣ ಪರಿಷತ್ತಿನ ಭಂಡಾರಕ್ಕೆ ಕಳುಹಿಸಬಹುದು.

ಸಂಪರ್ಕ ವಿಳಾಸ : ಸಂಪಾದಕರು, 'ಮಹಾಮನೆ', ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
೧ನೆಯ ಮುಖ್ಯರಸ್ತೆ, ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦



# ಮಹಾಮನೆ

ಸಂಪುಟ : ೭ ಮೇ ೨೦೦೫ ಸಂಚಿಕೆ : ೧೦

*ಅಧ್ಯಕ್ಷರು :*
ಗೊ.ರು. ಚನ್ನಬಸಪ್ಪ
*ಸಂಪಾದಕರು :*
ಎಂ.ಜಿ. ನಾಗರಾಜ್
ಎಚ್.ಎಸ್. ಸಿದ್ಧಗಂಗಪ್ಪ
*ಪ್ರಕಾಶಕರು :*
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಕಛೇರಿ
೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ
ಶಿವರಾತ್ರೀಶ್ವರ ವೃತ್ತ
ಜಯನಗರ, ಬೆಂಗಳೂರು - ೫೬೦ ೦೭೦
ದೂರವಾಣಿ : ೨೬೫೪ ೯೩೯೪

*ಮುದ್ರಕರು :*
***ಲಕ್ಷ್ಮಿ ಮುದ್ರಣಾಲಯ***
೫ನೆಯ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

*ಲೇಖಕರ ಅಭಿಪ್ರಾಯಗಳೆಲ್ಲ ಪರಿಷತ್ತಿನ ಅಭಿಪ್ರಾಯಗಳಲ್ಲ*

## ಬಾಗಿಲು ತೆರೆದರೆ .......



## 'ಮಹಾಮನೆ'ಯ ಬಾಗಿಲು ತೆರೆದರೆ ........

- * ಅಧ್ಯಕ್ಷರ ನುಡಿ, ಸಂಪಾದಕೀಯ ಬರಹಗಳು
- * ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರ ಚಟುವಟಿಕೆಗಳು
- * ಶರಣ ಸಾಹಿತ್ಯ ಕೃತಿಗಳು ಮತ್ತು ಶರಣ ಕ್ಷೇತ್ರಗಳ ಪರಿಚಯ
- * ಶರಣ ಸಾಹಿತ್ಯದಲ್ಲಿ ಕ್ಷೇತ್ರ ದುಡಿದ, ದುಡಿಯುತ್ತಿರುವ ಮಹನೀಯರ ಪರಿಚಯ
- * ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ
- * ಶರಣ ಸಾಹಿತ್ಯ - ಸಂಸ್ಕೃತಿಗಳಿಗೆ ಸಂಬಂಧಿಸಿದ ಹೊಸ ಶೋಧಗಳು
- * ಶರಣ ಸಾಹಿತ್ಯ ಕೃತಿಗಳ ಸಾದರ ಸ್ವೀಕಾರ ಮತ್ತು ವಿಮರ್ಶೆ
- * ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು
- * ಆಧುನಿಕ ವಚನಕಾರರ ಹೊಸ ವಚನಗಳು
- * ಓದುಗರೊಡನೆ ಸಂವಾದ - ಪ್ರಶ್ನೋತ್ತರ ವೇದಿಕೆ
- * ಶರಣ ಸಿದ್ಧಾಂತ : ತಾಂತ್ರಿಕ ಅಂಶಗಳ ವ್ಯಾಖ್ಯಾನ - ಇತ್ಯಾದಿ

# ಸ್ಮರಣೆಯ ಪದರುಗಳಲ್ಲಿ

ಸದ್‌ವ್ಯಕ್ತಿತ್ವವಿದ್ದಾಗ ಅದು ಉಳಿದವರ ನೆನಪಿಗೊಂದು ಇಡುಗಂಟು. ಅವರ ಮಾನಸ ಮೆಚ್ಚಿದುದಕ್ಕೆ, ಎದೆಯು ಸ್ಪಂದನವಾದುದಕ್ಕೆ, ಬೌದ್ಧಿಕವಾಗಿ ಅಪ್ಪಿದುದಕ್ಕೆ ಅದೇ ಸಾಕ್ಷಿ. ಈ ವ್ಯಕ್ತಿತ್ವ ಲೌಕಿಕವಾಗಿ ಅರಳಿ ಬಂದಾಗ ಸಾಮಾಜಿಕ ಸೇವಾ ನಿರತವಾಗಿ ನೆನಪಿನ ಅಚ್ಚಿಗಾಗಬಹುದು; ಆಧ್ಯಾತ್ಮಿಕವಾಗಿ ಪ್ರತಿಷ್ಠಾನಗೊಂಡಾಗ ಶಾಂತಿ ಶೀಲಗಳಲ್ಲಿ ನಿರತವಾಗಿ ಭಕ್ತರ ಮನಸಿನೊಳಗಡಗಬಹುದು; ಸಾಹಿತ್ಯಕವಾಗಿ ವಿಕಸಿಸಿದಾಗ ರಸಭಾವ, ಬೌದ್ಧಿಕ ಸಮನ್ವಯ ನಿರತವಾಗಿ ಸಂವಹನ ಶ್ರದ್ಧೆಯೂ ಕೂಡಿ, ಸಹೃದಯರ ಭಾವದಲ್ಲಿ, ಭಾವನೆಗಳಲ್ಲಿ ಐಕ್ಯಗೊಳ್ಳಬಹುದು; ಸಾಂಸ್ಕೃತಿಕವಾಗಿ ಆಚರಣೆಗೊಂಡಾಗ ಸದ್‌ಪರಂಪರೆಯ ಶ್ರೇಯ ಸಲಿಲವಾಗಬಹುದು. ಇವೆಲ್ಲದರ ಸಮಗ್ರ ಅಡಕವೆ ಜಂಗಮಚರ‍್ಯೆಯ ಶೀಲ ಪ್ರಾಕಾರವನ್ನು ಬಯಲುಗೊಳಿಸುತ್ತದೆ. ನಮ್ಮ ಶಿವಾಚಾರ್ಯರಲ್ಲಿ, ನಮ್ಮ ಶಿವಶರಣರಲ್ಲಿ ಇಂಥ ಸಮಗ್ರ ವ್ಯಕ್ತಿತ್ವವಿದ್ದ ಕಾರಣ ನಮ್ಮ ಸ್ಮರಣೆಯ ಸತತ ವಿಸ್ತಾರದಲ್ಲಿದ್ದಾರೆ. ಶತಶತಮಾನಗಳಾಚೆಗೂ ಬಂದು ಆಯಾ ವರ್ತಮಾನದವರ ಎದೆದುಂಬಿದ್ದಾರೆ, ಮನದಲ್ಲಿ ಅರಳಿದ್ದಾರೆ, ಭಾವದೊಳಾಡಿದ್ದಾರೆ, ಬೌದ್ಧಿಕಚಿಂತನಕ್ಕಳವಟ್ಟಿದ್ದಾರೆ. ಅಂದರೆ ಹಿಂದಿಗೂ, ಇಂದಿಗೂ, ಮುಂದಿಗೂ ಸೈಗೊಡುವ ಸಿರಿವ್ಯಕ್ತಿತ್ವ ಅವರದು. ಅಂತೆಯೇ ಸ್ಮರಣೆಗೆ ಆಕರವಾಗುವ ವ್ಯಕ್ತಿತ್ವ, ಆಧಾರವಾಗುವ ವ್ಯಕ್ತಿತ್ವ. ಸ್ಮರಣೆ ಎಂಬುದು ಒಂದು ರೀತಿಯಲ್ಲಿ ಪ್ರಾಚೀನದೊಡನೆ ಆಯಾ ವರ್ತಮಾನದ ಸಂವಾದ.

ಶರಣರ ವಚನಗಳ ಬಹುತೇಕ ಅಂಕಿತಗಳು ತಮ್ಮ ಆರಾಧ್ಯ ದೈವದ, ಇಷ್ಟದೈವದ ಶುಭಸ್ಮರಣೆಯ ಕುರುಹುಗಳೆ; ದೈವಿಕತೆಗೆ ಮಾನುಷಮುದ್ರೆಯೊತ್ತಿ ಮಾನವೀಯವಾಗಿ ಸ್ಮರಿಸಿದ ಸ್ಫುರಣ ಪ್ರಯತ್ನಗಳೆ. ಅಂತಹ ಸ್ಮರಣೆಯಲ್ಲಿ ಸಂವಾದ ಕಾರಣವಾಗಿ ಮೂಡಿರುವುದು ಈ ಅಂಕಿತ ದೇವನಾಮಗಳಂಥ ವ್ಯಕ್ತಿತ್ವವೆ. ಕೇಳಾ, ನೋಡಾ, ಹೇಳಾ ಎಂಬ ಸಂಬೋಧನಾತ್ಮಕ ಶಬ್ದಗಳು ಇದರ ಸೂಚಕವಾಗಿವೆ. ಹೀಗಾಗಿ ಆತ್ಮಸಂವಾದವನ್ನು, ಲೌಕಿಕ ಸಂವಾದವಾಗಿ, ನಂತರ ಸಮುದಾಯ ಸಂವಾದವಾಗಿ ರೂಪಿಸಿದ್ದು, ಅಂತಃಪ್ರೇರಣೆಯಿಂದ ಪಡಿಮೂಡಿಸಿದ್ದು ಶರಣರ ವಚನಗಳು, ಶಿವಾಚಾರ್ಯರಲ್ಲಿನ ಸಂವಾದಗಳು. ವೀರಶೈವ ಸಾಹಿತ್ಯದ ದೃಷ್ಟಿಯಿಂದ, ಹರಿಹರನ 'ಗಿರಿಜಾಕಲ್ಯಾಣ'ದ ಗಿರಿಜೆ-ವೇಷಧಾರಿ ಶಿವ, ರಗಳೆಯ ಮಲುಹಣ-ಮಲುಹಣೆ ಹಾಗೂ ಕುಂಬಾರಗುಂಡನೊಡನೆಯು ಕವಿಯ ಭಾವಸಂವಾದ, ಹೀಗೆಯೇ ಎಷ್ಟೋ ಸಾಕ್ಷ್ಯಗಳಿವೆ. ಬಸವಣ್ಣನ ಕರಸ್ಥಲದಲ್ಲಿ ಚುಳುಕಾದ ಲಿಂಗಯ್ಯನಲ್ಲಿ ಸಂವಾದ; ಅಕ್ಕ: ಪಕ್ಷಿ ಪ್ರಾಣಿ, ಗಿಡ ಮರಗಳೊಡನೆ ಪರಿಭಾವಿಸುವ ಪ್ರಕೃತಿ-ಚನ್ನಮಲ್ಲಿಕಾರ್ಜುನ ಸಂವಾದ ಸಂವೇದನೆ; ಶೂನ್ಯ ಸಂಪಾದನೆಯ ಹವಣಿನಲ್ಲಿ ಅಲ್ಲಮ-ಮುಕ್ತಾಯಕ್ಕರ ನಡುವಣ ತಾತ್ವಿಕ ಸಂವಾದ ಸಂವೇದನೆ-ಇತ್ಯಾದಿಗಳೆಲ್ಲ ಲೌಕಿಕಶೀಲ ಸಂವೇದನೆಗಳು ಆಧ್ಯಾತ್ಮಿಕ ಶ್ರೇಯ ಸಂವೇದನೆಗಳಲ್ಲಿ ಸಮರಸ ಸಾಧಿಸಿದ ಸ್ಮರಣಾರ್ಹ ಸಾಹಿತ್ಯಕ ಶಿವಶೀಲವಾಗಿವೆ. ಹೀಗಾಗಿ ಇವರೆಲ್ಲ ಮತೀಯ ಬಾಂಧವ್ಯ ಮೀರಿ ಸರ್ವಾದರಣೀಯ ವ್ಯಕ್ತಿತ್ವದ ಘನವಾಗಿ ನಮ್ಮ ಪರಂಪರೆಯಲ್ಲಿ ಬೆಳೆದು ಚಲಿಸುತ್ತಿದ್ದಾರೆ.

'ನಿಮ್ಮ ಶರಣರ ಸೂಳ್ನುಡಿಯ ಒಂದರಘಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ' ಎನ್ನುವ ದಾಸಿಮಯ್ಯ, ದೈವಿಕ ಬಲುಮೆಗೂ ಮೀರಿದ ಅನುಭಾವಿಕ ಸೂಳ್ನುಡಿಯ ಪರಾತ್ಪರ ಶಕ್ತಿಯನ್ನು ವಿನೀತ-ವಿನಮ್ರವಾಗಿ ಸ್ಮರಿಸುತ್ತಾನೆ; 'ನಿಮ್ಮ ಶರಣರ ನುಡಿಯೆ ಎನಗೆ ಗತಿ ಸೋಪಾನ ಚನ್ನಮಲ್ಲಿಕಾರ್ಜುನ' ಎನ್ನುವ ಅಕ್ಕ, ದಾಸಿಮಯ್ಯನನ್ನು ಅನುಸರಿಸಿದ್ದಾಳೆ. 'ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗಣ್ಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ-ಇಂತಿವರ ಕರುಣಪ್ರಸಾದ ಎನಗಾಯಿತ್ತು ಚೆನ್ನಮಲ್ಲಿಕಾರ್ಜುನಯ್ಯ'-ಎಂದು ಇಡೀ ಶರಣತತಿಯ ಪ್ರಾತಿನಿಧಿಕ ವ್ಯಕ್ತಿತ್ವವನ್ನು ಘನೀಕರಿಸಿ ಘನೀಕರಿಸಿ ಸ್ಮರಣೆಯ ಪ್ರತಿಮಾಭಾವವನ್ನು ಕಡೆದುಬಿಟ್ಟಿದ್ದಾಳೆ ಅಕ್ಕ.

ಸದ್ಯ ವಾರ್ಷಿಕ ವೈಶಾಖ ಮಾಸವು ಬುದ್ಧ-ಶಂಕರ-ಬಸವಣ್ಣನ ಮಾಸ; ಮುಖ್ಯವಾಗಿ ಬಸವಣ್ಣನನ್ನು, ಬಸವಣ್ಣನ ಭಕ್ತಿವ್ಯಕ್ತಿತ್ವವನ್ನು ಸ್ಮರಿಸುವ ಅವನ ನುಡಿಗಳೊಳಗೆ ನಮ್ಮ ಒಳಗನ್ನು ನೋಡಿಕೊಳ್ಳಬೇಕಾದ ಸಮಯ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ, ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ ಕೂಡಲಸಂಗಮದೇವಾ ಎನುಗಿದೇ ದಿಬ್ಯ' ಎಂದ ಬಸವಣ್ಣ ಶಿವಭಕ್ತರ ಬಲುಹಿನ ವ್ಯಕ್ತಿತ್ವವನ್ನು ಸ್ಮರಿಸಿದ್ದಾನೆ. ಅದಕ್ಕೆ ಅವನ ಮನಸ್ಸಾಕ್ಷಿಯೇ ಒಂದು ಅಗ್ನಿಪರೀಕ್ಷೆಗೊಡ್ಡಿಕೊಂಡು ಭಕ್ತಿಯ ಗೆಲುವನ್ನು ಶಿವಸಾಕ್ಷಿಯಾಗಿ ಪಡೆಯುವುದಾಗಿದೆ. ಒಂದು ಸಾಂಸ್ಕೃತಿಕ ದಿವ್ಯ ವ್ಯಕ್ತಿತ್ವದ ಪ್ರಚಂಡ ಪ್ರತಿಮಾಕಲ್ಪವಾಗಿ, ಕಲ್ಪಾತೀತನಾಗಿ ಬಸವಣ್ಣ ಇಲ್ಲಿ ಕಾಣಿಸಿಕೊಳ್ಳುತ್ತಾನೆ. ಇದು ವಿನಯದ ಪರಶಿವಶಕ್ತಿಯಾಗಿ ಅನುಭಾವಕ್ಕೆ ದಕ್ಕುತ್ತದೆ. ಇಂಥ ವ್ಯಕ್ತಿತ್ವ, ಸ್ಮರಣೆಯ ಗುರಿ ಇಂದು ಎಲ್ಲಿಂದೆಲ್ಲಿಗಿದೆ! ಸ್ಮರಣೆ ಮಾತ್ರ ವೇದಿಕೆಯ ಮಾತಿಗಿದೆ. ಆಚರಣೆ ವೇದಿಕೆಯಾಚೆ ಮರೆತುಹೋಗಿದೆ. ಮನೆಯ ಹಿರಿಯರ ನೆಲೆ ವೃದ್ಧಾಶ್ರಮಗಳಲ್ಲಿ ಅಲೆಯುತ್ತಿದೆ. ನಡೆ-ನುಡಿ-ನೆರೆಗೆ, ಸತ್ಯದ ಸತ್ವದ ಮಾತುಗಳ ನೆರವು, ಆಚರಣೆ ಇರಲಿ, ಸ್ಮರಣೆಯೂ ದಿಕ್ಕಾಪಾಲಾಗಿದೆ. ಇದು ಬಸವಣ್ಣ ನಡೆದ ರೀತಿಯಲ್ಲ, ನುಡಿದ ರೀತಿಯಲ್ಲ, ಚಿಂತಿಸಿದ ರೀತಿಯಲ್ಲ.

*ನೂರಾರು ದಿನಗಳ ಹಿಂದೆ ಆಡಿದ್ದ ಮಾತು*
*ವರ್ತಮಾನಕ್ಕೆ ಸರಕಲ್ಲ, ಅಡಗಿಹೋದ ಹಳೆಯ ಸ್ಮರಣೆ!*
*ನೂರಾರು ವರುಷಗಳ ಹಿಂದೆ ನಡೆದಿದ್ದ ರೂಢಿ*
*ಇಂದಿನವಸರಕ್ಕೆ ತಾಳೆ ಇಲ್ಲ ಉದುರಿಹೋದ ತಲೆಮಾರು ಸ್ಮರಣೆ!*
*ಸೊಡರ ಕೆಳಗಿನ ಕತ್ತಲನಣಕಿಸಿದ ನಿಯಾನ್ ಟ್ಯೂಬಿನ ಬೆಳಕೂ*
*ಹಳತಾಗಿ ಬಿಟ್ಟುಕೊಟ್ಟ ನೆಲೆಗೆ ಕತ್ತಲವಸರಕ್ಕೆ ಎಮರ್ಜೆನ್ಸಿ ಲೈಟು*
*ತಾತ್ಕಾಲಿಕ ಸ್ಮರಣೆ ಬೆಳಕು; ಅಚಲದೇವನಾಗೊಡೆಯ*
*ಹಳಗಾಲದ ಸದ್ದು ಮನೆದಳದ ಹಿತ್ತಲಗಿಡದ ಮದ್ದು*
*ಜನಪದ ಅದನುಂಡು ಬಾಳಿ ಬದುಕಿ ಕಂಡದ್ದು*
*ಪರಂಜ್ಯೋತಿ ಕಾಣಾ-ಸ್ಮರಿಸಿದರೆ ಕಾಂಬುದು ಹೊಸಜ್ಯೋತಿ.*

ಎಂ. ಜಿ. ನಾಗರಾಜ್
ಎಚ್. ಎಸ್. ಸಿದ್ಧಗಂಗಪ್ಪ





# ಒಂದು ಮಾನವೀಯ ಸೇವೆ



ಈ ಸಲದ 'ಮಹಾಮನೆ'ಯಲ್ಲಿ ಪ್ರಕಟಿಸಲು ರಾಯಚೂರು ಜಿಲ್ಲಾ ಸಿಂಧನೂರು ತಾಲೂಕ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಸವರಾಜ ಹಣಗಿ ಅವರು ಒಂದು ಸುದ್ದಿ ಕಳುಹಿಸಿದ್ದರು. ಅದನ್ನು ಕಂಡು ನನಗಾದ ಹರ್ಷವನ್ನು ವ್ಯಕ್ತಪಡಿಸಲು ಆ ಸುದ್ದಿಯನ್ನೇ ಈ ಅಂಕಣಕ್ಕೆ ವಸ್ತುವನ್ನಾಗಿ ಬಳಸಿಕೊಳ್ಳುತ್ತಿದ್ದೇನೆ.

ಅವರು ಕಳುಹಿಸಿರುವ ಸುದ್ದಿಯ ಪೂರ್ಣ ಪಾಠ ಹೀಗಿದೆ: "ಸಿಂಧನೂರು ಪಟ್ಟಣದಲ್ಲಿ ಬೇಸಗೆ ದಿನಗಳಲ್ಲಿ ಪುರಸಭೆಯವರು ೩-೪ ದಿನಗಳಿಗೊಮ್ಮೆ ನೀರು ಪೂರೈಸುವುದರಿಂದ, ಪಟ್ಟಣಕ್ಕೆ ಹಳ್ಳಿಗಳಿಂದ ಬರುವ ಜನರು ಮತ್ತು ಕೂಲಿ ಕಾರ್ಮಿಕರು ಅನುಭವಿಸುವ ಕುಡಿಯುವ ನೀರಿನ ತೊಂದರೆಯನ್ನು ಸ್ವಲ್ಪ ಮಟ್ಟಿಗಾದರೂ ತಣಿಸುವ ಸದುದ್ದೇಶದಿಂದ ನಾವು ಕಳೆದ ನಾಲ್ಕು ವರ್ಷಗಳಿಂದ ಬೇಸಗೆಯ ಮೂರು ತಿಂಗಳು ಪಟ್ಟಣದಲ್ಲಿ 'ಶ್ರೀ ಬಸವೇಶ್ವರ ಅರವಟ್ಟಿಗೆ'ಯನ್ನು ಸ್ಥಳೀಯ ಶ್ರೀ ಬಸವರಾಜ ಕೋರಿಶೆಟ್ಟಿ (ಎಸ್.ಬಿ.ಐ. ನೌಕರ) ಅವರ ದಾಸೋಹ ಪಡೆದು ನಡೆಸುತ್ತಿದ್ದೇವೆ. ಇದನ್ನು 'ಮಹಾಮನೆ'ಯಲ್ಲಿ ಪ್ರಕಟಿಸುವುದರ ಮೂಲಕ ಇಂತಹ ತೊಂದರೆ ಇರುವ ಬೇರೆ ಪಟ್ಟಣಗಳಲ್ಲಿಯೂ ಬೇರೆ ಬೇರೆ ಸೇವಾ ಸಂಘಟನೆಗಳು ಕಾರ್ಯಪ್ರವೃತ್ತರಾಗಲು ಪ್ರೇರಣೆ ನೀಡಲಿ ಎಂಬ ಬಯಕೆಯೊಂದಿಗೆ ಈ ವಿಷಯವನ್ನು ತಮ್ಮ ಅವಗಾಹನೆಗಾಗಿ ತರಲು ಇಚ್ಚಿಸುತ್ತೇನೆ. ಶರಣುಗಳೊಂದಿಗೆ.

ತಮ್ಮ ವಿಶ್ವಾಸಿ,
ಬಸವರಾಜ ಹಣಗಿ

ಇದನ್ನು ಓದುತ್ತಿದ್ದಂತೆ ಶರಣ ಸಾಹಿತ್ಯ ಪರಿಷತ್ತಿಗೂ ಕುಡಿಯುವ ನೀರಿನ ಅರವಟ್ಟಿಗೆಗೂ, 'ಮಹಾಮನೆ'ಗೂ ಏನು ಸಂಬಂಧ ಎಂದು ಪ್ರತಿಕ್ರಿಯಿಸುವವರೂ ಇದ್ದರೆ ಆಶ್ಚರ್ಯವಿಲ್ಲ. ಆದರೆ ನನ್ನ ದೃಷ್ಟಿಯಲ್ಲಿ ಸಿಂಧನೂರು ತಾಲೂಕ ಶರಣ ಸಾಹಿತ್ಯ ಪರಿಷತ್ತು ಮತ್ತು ಅಲ್ಲಿನ ಕನ್ನಡ ಸಾಹಿತ್ಯ ಪರಿಷತ್ತಿನ ಬಂಧುಗಳು ಈ ರಚನಾತ್ಮಕ ಸೇವೆಯ ಮೂಲಕ ನಿಜವಾದ ಶರಣ ಸಂಸ್ಕೃತಿಯನ್ನೇ ತೋರಿದ್ದಾರೆ.

ಶರಣ ಸಾಹಿತ್ಯ ಪರಿಷತ್ತು ಕೇವಲ ಶರಣರ ಸಾಹಿತ್ಯ ಪ್ರಸಾರಕ್ಕಷ್ಟೇ ಮೀಸಲಿಲ್ಲ; ಶರಣ ಸಂಸ್ಕೃತಿಯ ಪ್ರಸಾರವೂ ಅದರ ಧ್ಯೇಯೋದ್ದೇಶಗಳಲ್ಲಿ ಒಂದು. ಅದನ್ನು ನಮ್ಮ ಸಿಂಧನೂರು



ಶರಣ ಸಾಹಿತ್ಯ ಪರಿಷತ್ತು ಹಾಗು ಕನ್ನಡ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ ಶ್ರೀ ಬಸವೇಶ್ವರ ಅರವಟಿಕೆ, ಸಿಂಧನೂರು

ಬಂಧುಗಳು ಕೇವಲ ವೇದಿಕೆಯ ಉಪದೇಶವಾಗಿಸದೆ ಕೃತಿಗಿಳಿಸಿ ಶರಣರ ಮಾನವೀಯ ಸೇವೆಗೆ ಸಾಕ್ಷಿಯಾಗಿದ್ದಾರೆ. ಇದಕ್ಕಾಗಿ ಅವನ್ನು ಮನತುಂಬಿ ಅಭಿನಂದಿಸುತ್ತೇನೆ. ನಮ್ಮ 'ಮಹಾಮನೆ' ಓದುಗರೆಲ್ಲರೂ ಅವರನ್ನು ಅಭಿನಂದಿಸುತ್ತಾರೆ.

ಈ 'ಗಂಗಾ ದಾಸೋಹ'ದಲ್ಲಿ ಮುಖ್ಯ ಪಾತ್ರ ಸ್ಥಳೀಯ ಎಸ್.ಬಿ.ಐ.ನಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀ ಬಸವರಾಜ ಕೋರಿಶೆಟ್ಟಿ ಅವರದು. ಬ್ಯಾಂಕುಗಳಿರಲಿ, ಸರ್ಕಾರಿ ಸೇವೆಯಿರಲಿ, ಖಾಸಗಿ ಉದ್ಯಮಗಳಲ್ಲಿರಲಿ-ವಿವಿಧ ಹುದ್ದೆಗಳಲ್ಲಿ ಕೆಲಸ ಮಾಡುತ್ತಿರುವ ಲಕ್ಷಾಂತರ ಮಂದಿಯಿದ್ದಾರೆ. ವಾಸ್ತವವಾಗಿ ಈಗ ಅವರು ಗಳಿಸುತ್ತಿರುವ ವೇತನ ಸಾಮಾನ್ಯ ಜನರ ಆದಾಯಕ್ಕೆ ಹೋಲಿಸಿದರೆ ಕಡಮೆಯೇನಲ್ಲ. ಅವರೆಲ್ಲ ತಮ್ಮ ಆದಾಯದ ಶೇ. ಒಂದರಷ್ಟು ಪಾಲನ್ನು ಇಂತಹ ಮಾನವೀಯ ಸೇವೆಗಳಿಗೆ ಮೀಸಲಿರಿಸಿದರೂ ಸಾಕು, ಎಷ್ಟೋ ಸಮಸ್ಯೆಗಳಿಗೆ ಪರಿಹಾರ ದೊರಕೀತು.

ಆದರೆ 'ಹಸಿದು ಬಂದ ಗಂಡನಿಗೆ ಉಣಲಿಕ್ಕದೆ, ಗಂಡ ಬಡವಾದನೆಂದು ಮರುಗುವ ಹೆಂಡತಿ'ಯಂಥವರೇ ನಮ್ಮಲ್ಲಿ ಹೆಚ್ಚಾಗಿದ್ದಾರೆ. ನಮ್ಮ ಜನಪದದಲ್ಲಿ ಒಂದು ತ್ರಿಪದಿಯಿದೆ: "ಬಂಗಾರ ಬಳಿಯಿಟ್ಟು ಬೈಬ್ಯಾಡ ಬಡವರನು, ಬಂಗಾರ ನಿನಗೆ ಸ್ಥಿರವಲ್ಲ, ಮಧ್ಯಾಹ್ನದ ಬಿಸಿಲು ಹೊಳ್ಳುವುದು ತಡವಲ್ಲ". ತುಂಬ ಅನುಭವದ ಮಾತು. ಮಧ್ಯಾಹ್ನದ ಬಿಸಿಲು ಹೊರಳುವುದು ನಿಶ್ಚಿತ. ನಮ್ಮ ಬದುಕಿನಲ್ಲೂ ಅಂತಹ ಇಳಿಗಾಲ ಅನಿವಾರ್ಯ. ಆದ್ದರಿಂದ ಇದ್ದಾಗ ಕೈಲಾದಷ್ಟು ಉಪಕಾರದ ಕೆಲಸ ಮಾಡುವುದು ದೊಡ್ಡದು.

ಸಣ್ಣ ರೈತರು ಮತ್ತು ದಿನಗೂಲಿಯ ಕಾರ್ಮಿಕರನ್ನು ಬಿಟ್ಟರೆ ಉಳಿದ ಉದ್ಯೋಗಿಗಳೆಲ್ಲ ನಿಜವಾಗಿಯೂ ಅನುಕೂಲವಾಗಿದ್ದಾರೆ. ಅವರು ಎಷ್ಟೆಲ್ಲ ದೊಡ್ಡ ಕೊಡುಗೆ ನೀಡಬೇಕೆಂದೇನಿಲ್ಲ (ನೀಡಿದರೆ ಸ್ವಾಗತಾರ್ಹ) ಆದರೆ ತಮ್ಮ ಆದಾಯದಲ್ಲಿ ಒಂದಿನಿತು ಭಾಗವನ್ನು ಸಮಷ್ಟಿ ಹಿತಕ್ಕೆ ಬಳಸುವ ಸಂಕಲ್ಪ ಮಾಡಬೇಕು.

ನಮ್ಮ ಸ್ವಯಂ ಸೇವಾ ಮತ್ತು ಸಾಂಸ್ಕೃತಿಕ ಸಂಘ-ಸಂಸ್ಥೆಗಳೂ ಅಷ್ಟೆ. ತಮ್ಮ ನಿತ್ಯ ಕಾರ್ಯಚಟುವಟಿಕೆಗಳ ಜೊತೆಗೆ ನಮ್ಮ ಸಿಂಧನೂರಿನ ಶ್ರೀ ಬಸವರಾಜ ಕೋರಿಶೆಟ್ಟಿ ಅವರಂತಹ ಸಹೃದಯರ ಸಹಾಯ ಪಡೆದು 'ಶ್ರೀ ಬಸವೇಶ್ವರ ಅರವಟ್ಟಿಗೆ'ಯಂತಹ ಸೇವಾ ಚಟುವಟಿಕೆಗಳನ್ನು ನಡೆಸಬೇಕು. ಸಂಸ್ಥೆಗಳು ಅನಗತ್ಯ ವೈಭವದ ವೆಚ್ಚಗಳನ್ನು ಕಡಮೆಮಾಡಿ ಇಂತಹ ಅಗತ್ಯದ ಸೇವೆಗೆ ವಿನಿಯೋಗಿಸಬೇಕು.

ನಮ್ಮ ಸಿಂಧನೂರ ತಾಲೂಕ ಶರಣ ಸಾಹಿತ್ಯ ಪರಿಷತ್ತು ತನ್ನ ಸಾಹಿತ್ಯ ಚಟುವಟಿಕೆಗಳ ಜೊತೆಗೆ ಇಂತಹುದೊಂದು ವಿನಮ್ರ ಸೇವೆ ಸಲ್ಲಿಸುತ್ತಿದ್ದಾರೆ. ನಮ್ಮ ಪರಿಷತ್ತಿನ ಉಳಿದ ಕ್ಷೇತ್ರ ಘಟಕಗಳೂ ಸಣ್ಣ ಪ್ರಮಾಣದಲ್ಲಾದರೂ ಚಿಂತೆಯಿಲ್ಲ, ಯಾವುದಾದರೂ ಒಂದು ರಚನಾತ್ಮಕ ಸೇವಾಕಾರ್ಯ ಕೈಗೊಳ್ಳುವಂತಾಗಬೇಕೆಂದು ಆಶಿಸುತ್ತೇನೆ. ಬಹುಶಃ ಅಂತಹ ಸೇವೆ ಶರಣ ಸಾಹಿತ್ಯ ಪರಿಷತ್ತಿಗೆ ಮತ್ತಷ್ಟು ಶಕ್ತಿ ನೀಡುತ್ತದೆಂದು ಭಾವಿಸುತ್ತೇನೆ.

-ಗೊ.ರು.ಚ

## ಕೋಪ

"ಅವನು ನನಗೆ ವಿಪರೀತ ಕೋಪ ಬರಿಸಿದ"

"ಅವನು ನನ್ನನ್ನು ಯಾವಾಗಲೂ ಕೆಣಕುತ್ತಿರುತ್ತಾನ"

ಇಂತಹ ಹೇಳಿಕೆಗಳನ್ನು ನಾವು ಪದೇ ಪದೇ ಕೇಳುತ್ತೇವೆ. ಈ ಹೇಳಿಕೆಗಳಲ್ಲಿ ಅಡಗಿರುವ ಸತ್ಯವೇನೆಂದರೆ ಕೋಪಿಸಿಕೊಂಡ ವ್ಯಕ್ತಿ ತನ್ನ ದೌರ್ಬಲ್ಯಕ್ಕೆ ಇತರರನ್ನು ಉದ್ರೇಕಿಸಬಲ್ಲ. ಇಲ್ಲವೆ ಇಂತಹ ಭಾವನೆಗಳನ್ನು ನಮ್ಮಿಂದ ಹೊರಹೊಮ್ಮಿಸಲು ಕಾರಣವಾಗಬಲ್ಲ; ಅಷ್ಟೆ. ಆದ್ದರಿಂದ ನಮ್ಮಲ್ಲಿ ಇಂತಹ ಭಾವನೆಗಳು ಹುದುಗಿವೆ ಎಂಬುದನ್ನು ಅರಿತುಕೊಂಡು ಅವುಗಳ ಪೂರ್ಣ ಜವಾಬ್ದಾರಿಯನ್ನು ಒಪ್ಪಿಕೊಳ್ಳಬೇಕು.

ಕೋಪದಿಂದ ಇತರರೊಡನೆ ನಮ್ಮ ಸಂಬಂಧಗಳು ಕೆಡುತ್ತವೆ. ನಮಗೆ ಉದ್ರೇಕವಾಗುತ್ತದೆ. ಈ ಪರಿಸ್ಥಿತಿಯಲ್ಲಿ ನಮಗೆ ಅರಿವಿಲ್ಲದೆಯೇ ತಪ್ಪು ಕೆಲಸಗಳನ್ನು ಮಾಡಿಬಿಡುತ್ತೇವೆ. ನಂತರ ಅದಕ್ಕಾಗಿ ಪಶ್ಚಾತ್ತಾಪಪಡುತ್ತೇವೆ. ನಮ್ಮ ದೈಹಿಕ ಮತ್ತು ಮಾನಸಿಕ ಆರೋಗ್ಯವೂ ಕೆಡುತ್ತದೆ.

ಮುಂದಿನ ಸಲ ನಿಮಗೆ ಕೋಪ ಬಂದಾಗ:

೧. "ನಾನೇಕೆ ಕೋಪಗೊಂಡೆ?"-ಎಂದು ಪ್ರಶ್ನಿಸಿಕೊಳ್ಳಿ.

೨. ತಕ್ಷಣ ಕೂಗಾಡಬೇಡಿ-ದೀರ್ಘವಾಗಿ ಉಸಿರಾಡಿ; ೧ ರಿಂದ ೧೦ನ್ನು ಎಣಿಸಿ; ದೇಹವನ್ನು ಸಡಿಲಗೊಳಿಸಿ; ಶಾಂತಚಿತ್ತರಾಗಿ.

೩. ನನ್ನ ಕೋಪಕ್ಕೆ ಕಾರಣ ಏನು?-ನನ್ನ ದೌರ್ಬಲ್ಯವೆ? ಇತರರ ಮೇಲೆ ಅಸೂಯೆಯೆ? ನನ್ನ ಅಭ್ಯಾಸ ಬಲವೆ? ವಾಸ್ತವಿಕತೆ ನನ್ನ ನಿರೀಕ್ಷೆಗೆ ಸರಿದೂಗದಿರುವುದನ್ನು ಒಪ್ಪಿಕೊಳ್ಳಲಾಗದಂತಹ ನನ್ನ ಮನೋಭಾವವೆ? ನನ್ನ ಅಹಂಕಾರವೆ? ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿ.

೪. ಪರಿಶೀಲನೆಯ ನಂತರ ನಿಮ್ಮ ವ್ಯಕ್ತಿತ್ವದಲ್ಲಿ, ದೃಷ್ಟಿಕೋನದಲ್ಲಿ ಮತ್ತು ಮನೋಭಾವದಲ್ಲಿ ಅವಶ್ಯಕವಾದ ಪರಿವರ್ತನೆಯನ್ನು ಮಾಡಿಕೊಳ್ಳಿ. ಇದರಿಂದ ನಿಮ್ಮೊಡನೆ ಇತರರಿಗೆ ಉತ್ತಮ ಸಂಬಂಧಗಳು ಮೂಡುತ್ತವೆ. ನಿಮ್ಮ ಮನಸ್ಸಿನಲ್ಲಿ ಶಾಂತಿ ಸಮಾಧಾನಗಳು ನೆಲಸುತ್ತವೆ; ನಿಮ್ಮ ದೈಹಿಕ ಮತ್ತು ಮಾನಸಿಕ ಆರೋಗ್ಯವೂ ಸುಧಾರಿಸುತ್ತದೆ.

(ಸಂಗ್ರಹ)







# ಒಕ್ಕಲು ಮುದ್ದಯ್ಯ (ಒಕ್ಕಲಿಗ ಮುದ್ದಣ್ಣ)

-ಡಾ. ರಾಜಶೇಖರ ಇಚ್ಚಂಗಿ

'ಚೈತ್ರ' ವಿವೇಕಾನಂದ ನಗರ, ಹುಕ್ಕೇರಿ, ಜಿ. ಬೆಳಗಾವಿ



**'ಜೋಳದ ಹಾಳ' ಎಂಬ ಗ್ರಾಮದ ಭಕ್ತ ಒಕ್ಕಲು ಮುದ್ದಯ್ಯ, ಕೃಷಿ ಕಾಯಕದ ಮೂಲಕ ಜಂಗಮ ದಾಸೋಹ ನಡೆಸುವುದು ಇವನ ವ್ರತ. ಹೊಲದಲ್ಲಿ ಹೂಡಿದ ನೇಗಿಲಿಗೆ ಹತ್ತಿದ ಲಿಂಗವನ್ನು ಹೊರತೆಗೆದು ಪೂಜಿಸಿ, ಲಿಂಗದೀಕ್ಷೆ ಪಡೆದ. ರಾಜನು ಕೇಳಿದ ಹೆಚ್ಚಿನ ತೆರಿಗೆಯನ್ನು ಕೊಡದೆ, ಆ ಹಣವನ್ನು ದಾಸೋಹಕ್ಕೆ ವಿನಿಯೋಗಿಸಿದ ಈ ಶರಣನ ವಚನಮುದ್ರಿಕೆ "ಕಾಮಭೀಮ ಜೀವಧನದೊಡೆಯ".**

ಈತ ಒಬ್ಬ ವಚನಕಾರ. ಇವನ ಕಾಲ ಸು. ೧೧೬೦ ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ಶಾಂತಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ'ದಲ್ಲಿ ಉಲ್ಲೇಖಿತವಾಗಿರುವ ಅಂಶಗಳನ್ನು ಗಮನಿಸಿ ಈತನ ಜೀವನ ಚರಿತ್ರೆಯನ್ನು ಹೀಗೆ ಸಂಗ್ರಹಿಸಬಹುದು:

'ಜೋಳದ ಹಾಳು' ಈತನ ಗ್ರಾಮ. ಬೇಸಾಯ ಈತನ ಕಾಯಕ. ಹದಿನೆಂಟು ಧಾನ್ಯಗಳನ್ನು ಬೆಳೆದು ರಾಜನಿಗೆ ಕೊಡಬೇಕಾದ ತೆರಿಗೆಯನ್ನು ಕೊಟ್ಟು, ಉಳಿದುದರಲ್ಲಿ ಈತ ಜಂಗಮಸೇವೆಯನ್ನು ಮಾಡಿಕೊಂಡಿದ್ದನು. ಆದರೆ ಈತನು ಗುರುಕಾರುಣ್ಯವುಳ್ಳನಾಗಿದ್ದರಿಂದ ಯಾವಾಗಲೂ ಆ ಚಿಂತೆಯಲ್ಲಿಯೇ ಮಗ್ನನಾಗಿರುತ್ತಿದ್ದನು.

ಹೀಗಿರುವಾಗ ಅವನು ಒಂದು ದಿನ ಬತ್ತವನ್ನು ಬಿತ್ತಿ ಹರಗುವುದಕ್ಕಾಗಿ ನೇಗಿಲು ಹೊಡೆಯುತ್ತಿದ್ದಾಗ ನೇಗಿಲಿಗೆ ಏನೋ ಸಿಕ್ಕಿಕೊಂಡು ತಡೆಯಿತು. ಅಡ್ಡಿಯಾದ ವಸ್ತುವನ್ನು ತರಿದುಹಾಕಲು ಈತ ಕೊಡಲಿಯನ್ನು ತೆಗೆದುಕೊಂಡು ಬರಲು, ಶಿವನು ತಾನು ಆದಿನಾಥನೆಂಬ ಲಿಂಗವಾಗಿ ಅಲ್ಲಿ ಇರುವುದಾಗಿಯೂ ಕೊಡಲಿಯಲ್ಲಿ ಕಡಿಯದೆ ಹಾರೆಯಲ್ಲಿ ಮೆಲ್ಲನೆ ಅಗೆಯಬೇಕೆಂಬುದಾಗಿಯೂ ಅಶರೀರವಾಣಿಯ ರೂಪದಲ್ಲಿ ಹೇಳಿದನು. ಅದರಂತೆ ಮಾಡಲು ಒಂದು ಲಿಂಗ ದೊರಕಿತು. ಮುದ್ದಯ್ಯ ಅದನ್ನು ಅಲ್ಲಿಯೇ ಸ್ಥಾಪಿಸಿ ಜೋಳದ ಅಂಬಲಿಯನ್ನೂ ತುಂಬೆಸೊಪ್ಪಿನ ಪಾಕವನ್ನೂ ಅದರ ಮುಂದೆ ನೈವೇದ್ಯವಾಗಿ ಇಟ್ಟು, ತಾನು ದಣಿದಿದ್ದುದರಿಂದ ಒಂದು ಎಕ್ಕೆಯ ಗಿಡದ ಕೆಳಗೆ ನಿದ್ದೆ ಹೋದನು. ಎಚ್ಚರಗೊಂಡಾಗ ಅವನ ಮುಂದೆ ಗುರುರೂಪವನ್ನು ಧರಿಸಿದ ಜಂಗಮನು ಕಾಣಿಸಿಕೊಂಡು, ಇವನಿಗೆ ಶಿವದೀಕ್ಷೆ ಕೊಟ್ಟು, ತಾನು ಆದಿನಾಥ ಲಿಂಗದಲ್ಲಿ ಐಕ್ಯನಾದನು. ಹೀಗೆ ಮುದ್ದಯ್ಯನು ಆದಿನಾಥ ಲಿಂಗದಿಂದ ದೀಕ್ಷೆಯನ್ನು ಹೊಂದಿ ಒಕ್ಕಲುತನ ಕಾಯಕವನ್ನು ಮಾಡುತ್ತ ದಾಸೋಹ ಭಾವದಿಂದ ಇರಹತ್ತಿದನು.

ಅವನ ಕಾಯಕಕ್ಕೆ ಸಂಬಂಧಿಸಿದಂತೆ ಒಮ್ಮೆ ಒಂದು ಪ್ರಸಂಗ ನಡೆಯಿತು. ತೆರಿಗೆಯನ್ನು ಕೊಟ್ಟ ಮೇಲೂ ಇನ್ನೂ ಹೆಚ್ಚಿನ ತೆರಿಗೆ ಕೊಡಬೇಕೆಂದು ರಾಜಭಟರು ಮುದ್ದಯ್ಯನನ್ನು ನಿರ್ಬಂಧಿಸಿದರು. ಅವನು ಅವರಿಂದ ತಪ್ಪಿಸಿಕೊಂಡು ಹೋಗಿ "ಮೂವತ್ತು ಕೊಳಗದ ಭೂಮಿಗೆ ಅರವತ್ತು ಹೊನ್ನನ್ನು ತೆತ್ತಿದ್ದರೂ ರಾಜಭಟರು ತನ್ನನ್ನು ಮತ್ತೆ ಹೆಚ್ಚು ಕೇಳುತ್ತಿದ್ದಾರೆಂದು" ರಾಜನಿಗೆ ದೂರಿತ್ತನು. ಅದಕ್ಕೆ ರಾಜನು ಉದಾಸೀನನಾಗಿರಲು ಮುದ್ದಯ್ಯನು ಅಲ್ಲಿಂದ ಹೊರಟು ಬಂದು ತನ್ನ ಗ್ರಾಮದವರ ಮುಂದೆ ತಾನು ತೆರಿಗೆ ಸಲ್ಲಿಸಿರುವುದಕ್ಕೆ 'ಗುತ್ತಿಗೆ ಪಟ್ಟೆ'[1]ಯನ್ನು ಬರಯಿಸಿಕೊಂಡನು. ಹೀಗೆ ಇರುವಾಗ ಗುತ್ತಿಗೆ ಪಟ್ಟಿಯನ್ನು ಕೊಟ್ಟಿದ್ದರೂ ಅರಸನ ಕಾಟ ಮತ್ತೆ ಪ್ರಾರಂಭವಾಯಿತು. ಆಗ ಮುದ್ದಯ್ಯ ತನ್ನ ತೊಂದರೆಯನ್ನು ಆದಿನಾಥ ಲಿಂಗದ ಮುಂದೆ ತೋಡಿಕೊಂಡನು. ರಾಜನಿಗೆ ಇನ್ನು ಹೆಚ್ಚು ಕರ ಕೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದನು. ಅದೇ ಹಣವನ್ನು ದಾಸೋಹಕ್ಕಾಗಿ ವಿನಿಯೋಗಿಸಿದನು. ಕೊನೆಗೆ ಆದಿನಾಥ ಲಿಂಗದಲ್ಲಿಯೆ ಐಕ್ಯನಾದನು.

**ವಚನಗಳು** : ಇವನ ಹನ್ನೆರಡು ವಚನಗಳು ದೊರಕಿವೆ. "ಕಾಮಭೀಮ ಜೀವಧನದೊಡೆಯ" ಎಂಬುದು ಇವುಗಳ ಅಂಕಿತ. 'ಪರಮಾತ್ಮನು ಪ್ರಿಯಕರನೂ ಬಲಶಾಲಿಯೂ ಆಗಿದ್ದು, ಅವನು ಜಗತ್ತಿನಲ್ಲಿರುವ ಜೀವಿಗಳಿಗೆ ಒಡೆಯನು' ಎಂಬ ಭಾವವು ಈ ಅಂಕಿತದಲ್ಲಿದೆ. ವಚನಕಾರರ ಅಂಕಿತಗಳಲ್ಲಿ ಇದು ತೀರ ಹೊಸದು.

ಒಕ್ಕಲು ಮುದ್ದಯ್ಯನು ಒಕ್ಕಲುತನದ ರೀತಿಗಳನ್ನು ವಿವರಿಸುತ್ತ ಅವುಗಳ ಮೂಲಕ ಪಾರಮಾರ್ಥಿಕವನ್ನು (ಲಿಂಗಾಂಗ ಸಾಮರಸ್ಯ) ಹೇಗೆ ಸಾಧಿಸಬಹುದು ಎಂಬುದನ್ನು ಸ್ವಾರಸ್ಯಪೂರ್ಣವಾಗಿ ನಿರೂಪಿಸಿದ್ದಾನೆ.

*"ಅಂಗವೆ ಭೂಮಿಯಾಗಿ, ಲಿಂಗವೆ ಬೆಳೆಯಾಗಿ,*
*ವಿಶ್ವಾಸವೆಂಬ ಬತ್ತ ಬಲಿದು ಉಂಡು*
*ಸುಖಿಯಾಗಿರಬೇಕೆಂದ ಕಾಮಭೀಮ ಜೀವಧನದೊಡೆಯ"[2]*

೧. ಗುತ್ತಿಗೆದಾರನು ಒಕ್ಕಲುಗಳಿಂದ ವಸೂಲು ಮಾಡುವ ತೆರಿಗೆಯುಳ್ಳ ಪಟ್ಟಿ (ಸರಕಾರಿ ದಾಖಲು).

೨. ಒಕ್ಕಲಿಗ ಮುದ್ದಣಗಳ ವಚನ. ಪು. ೬೭೦.



ತಾನು ಉತ್ತಮ ಕುಲದವನಲ್ಲದಿದ್ದರೂ ತನ್ನ ಪ್ರಾಮಾಣಿಕ ಸೇವೆಯನ್ನು ಸ್ವೀಕರಿಸಬೇಕೆಂದು ಶಿವನಲ್ಲಿ ಹೀಗೆ ಮೊರೆ ಇಡುತ್ತಾನೆ:

*"ವೇದಶಾಸ್ತ್ರವನೋದುವುದಕ್ಕೆ ಹಾರುವನಲ್ಲ,*
*ಇರಿದು ಮೆರೆವುದಕ್ಕೆ ಕ್ಷತ್ರಿಯನಲ್ಲ,*
*ವ್ಯವಹರಿಸುವುದಕ್ಕೆ ವೈಶ್ಯನಲ್ಲ,*
*ಉಳುವ ಒಕ್ಕಲು ಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯಾ,*
*ಕಾಮಭೀಮ ಜೀವಧನದೊಡೆಯ ನೀನೆ ಬಲ್ಲೆ.*[೧]

ಈ ಕೆಳಗಿನ ವಚನದಲ್ಲಿ ಬಂಡಾಯದ ಮನೋಧರ್ಮವಿದ್ದು ಅನ್ಯಾಯವಾದಾಗ ಶಿವಶರಣರೆಲ್ಲ ಪ್ರತಿಭಟಿಸಿದ್ದು ಕಂಡುಬರುತ್ತದೆ. ಇದಕ್ಕೆ ಒಕ್ಕಲಿಗ ಮುದ್ದಯ್ಯ ಹೊರತಲ್ಲ.

*"ಮೂರಡಿ ಮಣ್ಣಿಗೆ ಆರು ಹೊನ್ನು ತೆತ್ತು,*
*ಮೀರಿ ಹದಿಕೆಯ ಬೇಡೆನೆಂದು ಈ ಗ್ರಾಮದವರ ಮುಂದಿಟ್ಟು*
*ಮೀರಲಿಲ್ಲಾಯೆಂದು ಪಟ್ಟೆಯಕೊಟ್ಟು,*
*ಮತ್ತೂರುಗೂಡಿ ಹದಿಕೆಯ ಬೇಡಿದಡೆ, ನಾ ಕೊಡಲಿಲ್ಲ.*
*ನೀ ಕೊಟ್ಟ ಪಟ್ಟೆ*
*ನಮ್ಮ ನಟ್ಟ ನಡುಮನೆಯ ಐದು ಕಾಲ ನೆಲಹಿನಲ್ಲಿ ಕಟ್ಟಿಯದೆ ಕೋ*
*ನೀ ತಪ್ಪಿದಡೆ ನಿನಗೆ ಹೇಳುವ ಒಡೆಯರುಂಟೆ?*
*ನಾನೊಕ್ಕಲು ನೀನೊಡೆಯ*
*ಮೀರಿಕೊಂಡಿಹೆನೆಂದಡೆ*
*ಮುನ್ನವೇ ಸಿದ್ದಾಯ ಸೆರೆಗೆ ನಾನೊಳಗು*
*ಗುತ್ತಿಗೆಕಾರಂಗೆ ಮತ್ತೆ ಕುಳವುಂಟೆ?*
*ಇನ್ನು ಕೊಟ್ಟೆನಾದೊಡೆ*
*ಎನ್ನ ಹಟ್ಟಿ ಕೊಟ್ಟಿಗೆಯೊಡೆಯ ಕಾಮಭೀಮ ಜೀವಧನದಾಣೆ."*[೨]

ಈ ಮಾತನ್ನು ಒಕ್ಕಲು ಮುದ್ದಯ್ಯನು ತನ್ನ ರಾಜನಿಗೆ ಉದ್ದೇಶಿಸಿ ಹೇಳುತ್ತಾನೆ. "ನಾನು ಮೂರಡಿ ಭೂಮಿಗೆ ಆರು ಹೊನ್ನಿನಂತೆ ಅರವತ್ತು ಹೊನ್ನುಗಳನ್ನು ರಾಜನಿಗೆ ಕಂದಾಯವನ್ನು ಕೊಟ್ಟಿದ್ದೇನೆ. ಆದರೂ ಹೆಚ್ಚಿನ ಹಣವನ್ನು ಅವನು ಕೊಡಬೇಕೆಂದು ಒತ್ತಾಯಿಸುತ್ತಿದ್ದಾನೆ. ಇಂಥಹ ಹದಿಕೆಯ (ಪಾಲು) ಹಣವನ್ನು ಕೊಡುವ ವಿಷಯವನ್ನು ಗ್ರಾಮದವರ ಮುಂದಿಡಲು ಅವರು 'ನಾ ಕೊಟ್ಟ ಕಂದಾಯವು ಸರಿಯಾಗಿದ್ದು, ಅರಸನ ಅಪ್ಪಣೆಯನ್ನು ನಾನು ಮೀರಲಿಲ್ಲ' ಎಂದು ಬರಹವನ್ನು ನನಗೆ ಕೊಟ್ಟಿದ್ದಾರೆ. ಆದರೂ ರಾಜನು ಊರವರನ್ನೊಳಗೊಂಡು ಪುನಃ ನನ್ನಿಂದ ಹದಿಕೆಯನ್ನು (ಪಾಲು) ಬೇಡುತ್ತಾನೆ. ಅದನ್ನು ನಾನು ಕೊಡಲಿಲ್ಲ. ಅರಸನು ಕೊಟ್ಟಂಥ ಪಟ್ಟೆಯು (ಸರಕಾರಿ ದಾಖಲೆ) ನನ್ನ ಮನೆಯಲ್ಲಿದೆ. ಆದರೆ ಅವನು ಹೆಚ್ಚಿನ ಹಣವನ್ನು ಬೇಡಿದರೆ, ಅವನಿಗೆ ತಿಳಿಸಿ ಹೇಳುವ ಒಡೆಯರಾರು? ಯಾಕಂದರೆ ನಾನು ಒಕ್ಕಲು ಆಗಿದ್ದೇನೆ ಮತ್ತು ಅವನು ನನ್ನ ಒಡೆಯನು. ಆದರೂ ಅವನು ಮೀರಿ ಕಂದಾಯವನ್ನು ತೆಗೆದುಕೊಳ್ಳುವನೆಂದರೆ, ನಾನು ಅವನ ಸೆರೆ ಸಂಕೋಲೆಯ ಬಂಧನವನ್ನು ಹೊಂದಲು ಸಿದ್ಧನಿದ್ದೇನೆ. ಆದರೆ ಇದರಿಂದ ಗುತ್ತಿಗೆದಾರರಿಗೆ ಕುಳಗಳು (ತೆರಿಗೆ) ಉಳಿಯಲಾರವು. ರಾಜನೇ, ನಾನು ನಿನಗೆ ಈ ಹೆಚ್ಚಿನ ಕಂದಾಯವನ್ನು ಕೊಟ್ಟೆನಾದರೆ, ನನ್ನ ಹಟ್ಟಿ ಕೊಟ್ಟಿಗೆಗೆ ನಿಜವಾದ ಒಡೆಯನಾದ ಪರಮಾತ್ಮನ ಆಣೆ" ಎಂದು ಪ್ರತಿಜ್ಞೆ ಮಾಡುತ್ತಾನೆ. ಅಂದರೆ ತನ್ನ ಹಟ್ಟಿ ಕೊಟ್ಟಿಗೆಯ ಒಡೆಯನು ರಾಜನಲ್ಲ, ಆದರೆ ಪರಮಾತ್ಮನು ಎಂಬ ಭಾವವನ್ನು ಇಟ್ಟುಕೊಂಡು ವಚನಕಾರನು ಈ ವಚನವನ್ನು ಪ್ರತಿಜ್ಞಾಪೂರ್ವಕವಾಗಿ ನುಡಿದಿದ್ದಾನೆ.

ಈ ವಚನದಿಂದ "ಮುದ್ದಯ್ಯನ ಕಾಲದಲ್ಲಿ ರಾಜರು ಕಂದಾಯುವನ್ನು ಹೇಗೆ ವಸೂಲು ಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ. ಅವರು ಪ್ರತಿಯೊಬ್ಬ ಒಕ್ಕಲಿಗನು ಕಂದಾಯವನ್ನು ಎಷ್ಟು ಕೊಡಬೇಕೆಂಬುದನ್ನು ಗ್ರಾಮದವರೆಲ್ಲರೂ ಕೂಡಿ ನಿರ್ದಿಷ್ಟಪಡಿಸಿ ಅದನ್ನು ವಸೂಲುಮಾಡಲು ಗುತ್ತಿಗೆದಾರರನ್ನು ನೇಮಿಸುತ್ತಿದ್ದಂತೆಯೂ, ಈ ಗುತ್ತಿಗೆದಾರರು ಹಳ್ಳಿಯ ಪಂಚರ ಸಹಾಯದಿಂದ ಕಂದಾಯ ವಸೂಲು ಮಾಡಿ ರಾಜನಿಗೆ ಅದನ್ನು ತಲುಪಿಸುತ್ತಿದ್ದಂತೆಯೂ ತಿಳಿದುಬರುತ್ತದೆ. ರಾಜರು ಗ್ರಾಮದ ಒಕ್ಕಲುಗಳು ಕೊಡತಕ್ಕ ಕಂದಾಯದ ವಿಷಯವಾಗಿ ಕೆಲವೊಂದು ಬರಹಗಳನ್ನು ತಯಾರಿಸುತ್ತಿದ್ದರು. ಇದಕ್ಕೆ 'ಪಟ್ಟೆ' ಎಂಬ ಹೆಸರಿದ್ದ ಹಾಗೆ ತೋರುತ್ತದೆ.

'ಕಾಯಕ' ಮಾಡುವಲ್ಲಿ ಶರಣನು 'ನ್ಯಾಯವಾದದ್ದಕ್ಕೋಸ್ಕರ ಮಾತ್ರ ಹಣವನ್ನು ವೆಚ್ಚ ಮಾಡತಕ್ಕದ್ದು' ಎಂಬ ಭಾವವು ಇದರಲ್ಲಿದೆ. ಹೀಗೆ ಮಾಡುವಲ್ಲಿ ಹಣ ಉಳಿದರೆ ಅದನ್ನು 'ದಾಸೋಹ'ಕ್ಕೆ ಅಂದರೆ ಗುರು, ಲಿಂಗ, ಜಂಗಮಗಳಿಗೆ ಮತ್ತು ತಾನು ಮಾಡುವ ಸತ್ಕಾರ್ಯಗಳಿಗೆ ವಿನಿಯೋಗಿಸತಕ್ಕದ್ದು-ಇದು ಶಿವಶರಣರ

ನೀನು ಕುರುಡ; ನಾನು ಕಿವುಡ ಮತ್ತು ಮೂಕ. ಆದ್ದರಿಂದ ನಾವಿಬ್ಬರೂ ಪರಸ್ಪರ ಕೈಗಳನ್ನು ಮುಟ್ಟಿ ಒಬ್ಬರಿಗೊಬ್ಬರು ಅರ್ಥ ಮಾಡಿಕೊಳ್ಳೋಣ.

-ಖಲೀಲ್ ಗಿಬ್ರಾನ್

೧. ಒಕ್ಕಲಿಗ ಮುದ್ದಣಗಳ ವಚನ. ಪು. ೬೭೫.
೨. ಒಕ್ಕಲಿಗ ಮುದ್ದಣಗಳ ವಚನ. ಪು. ೬೭೪.







ನಡೆಯಾಗಿರುತ್ತದೆ. ಈ ತತ್ವಗಳು ಒಕ್ಕಲು ಮುದ್ದಯ್ಯ '(ಒಕ್ಕಲಿಗ ಮುದ್ದಣ್ಣ)ನ ಚರಿತ್ರೆಯಲ್ಲಿ ಅಡಕವಾಗಿರುತ್ತದೆ.

ಶಿವಶರಣರು ಬಹುತರವಾಗಿ ಬಡವರು. ಅವರು ತಮ್ಮ ಶಿವಾನುಭವದಂತೆ ನಡೆಯುವಲ್ಲಿ ಅರಸರ ಬಲಾತ್ಕಾರಗಳನ್ನು ಸಹ ವಿರೋಧಿಸುವ ಪ್ರಸಂಗಗಳು ಅವರಿಗೆ ಬಂದಿವೆ. ಆಗ ಅವರು ಹೇಗೆ ನಡೆದುಕೊಂಡರೂ ಎಂಬುದನ್ನು ಒಕ್ಕಲು ಮುದ್ದಯ್ಯ ಮತ್ತು ಪಿಟ್ಟವ್ವೆ ಇವರ ಚರಿತ್ರೆಗಳಿಂದ ನಾವು ಅರಿತುಕೊಳ್ಳಬಹುದು.

ಆಕರ ಗ್ರಂಥಗಳು :

೧. ಒಕ್ಕಲಿಗ ಮುದ್ದಣ್ಣ-ಕೆ.ಜಿ. ನಾರಾಯಣ ಪ್ರಸಾದ. ಪು. ೫೫೮-೫೮೭. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ. ಸಂ. ೪, ೧೯೭೭.

೨. ಒಕ್ಕಲಿಗ ಮುದ್ದಣ್ಣಗಳ ವಚನ-ಪು. ೬೭೦, ೬೭೪-೬೭೫. ಸಂಕೀರ್ಣ ವಚನ ಸಂಪುಟ-೧. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೧೯೯೩.

೩. ಹಳಕಟ್ಟಿ ನುಡಿಪರುಷ (ಸಂ) ಶಾಂತರಸ, ಪ್ರ: ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೨. (ಪು. ೨೬೪-೨೭೦)

## ನಾವು ಪರಿವರ್ತನೆಗೊಳ್ಳಬಹುದು / ಯಶಸ್ವಿಯಾಗಬಹುದು

| ಹೆಸರು | ಇವರು ಏನಾಗಿದ್ದರು? | ಇವರು ಏನಾದರು? |
|---|---|---|
| ಅಲ್ಬರ್ಟ್ ಐನ್ ಸ್ಟೈನ್ | ಸಾಮಾನ್ಯ ಗುಮಾಸ್ತ | ವಿಶ್ವಪ್ರಸಿದ್ಧ ವಿಜ್ಞಾನಿ |
| ಏಬ್ರಹಾಂ ಲಿಂಕನ್ | ಬಡರೈತನ ಮಗ | ಅಮೇರಿಕದ ರಾಷ್ಟ್ರಪತಿ |
| ಗೋಲ್ಡ ಮೈರ್ | ಸಾಮಾನ್ಯ ಶಾಲೆಯ ಉಪಾಧ್ಯಾಯಿನಿ | ಇಸ್ರೇಲ್‌ನ ಪ್ರಧಾನಮಂತ್ರಿ |
| ಫ್ರಾಂಕ್‌ಲಿನ್ ಡಿ. ರೋಸ್‌ವೆಲ್ಟ್ | ಎರಡೂ ಕಾಲುಗಳಿಗೆ ಲಕ್ವ ಹೊಡೆದ ರೋಗಿ | ಅಮೇರಿಕದ ರಾಷ್ಟ್ರಪತಿ |
| ಹೋಮರ್ | ಕುರುಡ | ಗ್ರೀಕ್ ಭಾಷೆಯ ಮಹಾಕವಿ |
| ಹೆಲೆನ್ ಕೆಲ್ಲರ್ | ಕುರುಡಿ, ಕಿವುಡಿ ಮತ್ತು ಮೂಗಿ | ಸುಪ್ರಸಿದ್ಧ ಕವಯತ್ರಿ |
| ಡೆಮಾಸ್ತನೀಸ್ | ತೊದಲುವ ಭಯ ಭೀತಿಯ ವ್ಯಕ್ತಿ | ಗ್ರೀಕ್‌ನ ಸುಪ್ರಸಿದ್ಧ ವಾಗ್ಮಿ |
| ಬೆಥೋವನ್ | ಕಿವುಡ | ಸುಪ್ರಸಿದ್ಧ ಸಂಗೀತ ಸಂಯೋಜಕ |
| ಹರಿಲಾಲ | ಪೇಪರ್ ಆಯುವ ಬಡ ವ್ಯಕ್ತಿ | ಹಾಂಗ್‌ಕಾಂಗಿನ ಅತ್ಯಂತ ಶ್ರೀಮಂತ ಭಾರತೀಯ (೪೫೦ ದಶಲಕ್ಷ ಡಾಲರ್ ಆಸ್ತಿ) |
| ಎಂ.ಎಸ್. ಒಬೆರಾಯ್ | ಸಾಮಾನ್ಯ ಗುಮಾಸ್ತ | ವಿಶ್ವಾದ್ಯಂತ ಅನೇಕ ಹೋಟೆಲ್‌ಗಳ ಮಾಲೀಕ |
| ಕೆ.ಕೆ. ಪಟೇಲ್ | ಒಬ್ಬ ರೈತನ ಮಗ | 'ನಿರ್ಮಾ' ಸಾಬೂನಿನ ಅತಿ ಹೆಚ್ಚಿನ ಮಾರಾಟಗಾರ (ವರ್ಷಕ್ಕೆ ೧೦೦೦ ಕೋಟಿ ರೂಪಾಯಿಗಳ ಮಾರಾಟ) |
| ಟೋಪಿವಾಲ | ೧೦೦ ರೂ. ಬಂಡವಾಳ ಹಾಕಿ ವ್ಯಾಪಾರ ಪ್ರಾರಂಭಿಸಿದ ಮೆಟ್ರಿಕ್ಯುಲೇಟ್ ಓದಿದ ವ್ಯಕ್ತಿ | ಈಗ ವರ್ಷಕ್ಕೆ ೫ ಕೋಟಿ ರೂ.ಗಳಷ್ಟು 'ಶಿಂಗಾರ್' ಬಿಂದಿಯನ್ನು ಮಾರುತ್ತಾನೆ. |
| ಸಿ.ಎನ್. ಜಾನಕಿ | ಎರಡೂ ಕಾಲುಗಳಿಗೆ ಪೋಲಿಯೋ ಹೊಡೆದಿದೆ | ಪ್ರಪಂಚದಲ್ಲೇ ಒಬ್ಬ ಅತ್ಯುತ್ತಮ ಈಜುಗಾತಿ |



# ಕರ್ನಾಟಕದ ಲಿಂಗಾಯತರು

-ಬಿರ್ಗಿಟ್ ರೋಢ್ ಮತ್ತು ಸ್ವೆನ್ ರೋಢ್

**(ಕಳೆದ ಸಂಚಿಕೆಯಿಂದ)**

**ಲಿಂಗಾಯತ - ಕೆಲವು ಲಕ್ಷಣಗಳು**

ಲಿಂಗಾಯತ ಚಳವಳಿಯಲ್ಲಿ ಬಸವಣ್ಣ ಮತ್ತು ಅವನ ಸಹಶರಣರಿಂದ ರಚಿಸಲ್ಪಟ್ಟ ವಚನ ಸಾಹಿತ್ಯದಲ್ಲಿ ನಿರೂಪಿತವಾಗಿರುವ ಮೂಲ ಸೈದ್ಧಾಂತಿಕ ಪರಿಕಲ್ಪನೆಗಳಲ್ಲಿ ತನ್ನ ನಂಬಿಕೆಯನ್ನು ಮುಕ್ತವಾಗಿ ವ್ಯಕ್ತಪಡಿಸುವ ವ್ಯಕ್ತಿಯನ್ನು 'ಲಿಂಗಾಯತ' ಎಂದು ಹೇಳಬಹುದು. ಈ ಸೈದ್ಧಾಂತಿಕ ಪರಿಕಲ್ಪನೆಗಳೆಂದರೆ-ಇಷ್ಟಲಿಂಗ, ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣ. ಇವು ನಡೆ-ನುಡಿಗಳ ನೀತಿ ಸಂಹಿತೆಯಾಗಿವೆ.

ಷಟ್‌ಸ್ಥಲ-ಶಿವನೊಡನೆ ಒಂದಾಗುವ ಆರು ಹಂತಗಳು. ಅವು ಒಂದಕ್ಕೊಂದು ಮೇಲ್ಪಾಚಿಕೊಂಡಿದ್ದು ಹಂತದಿಂದ ಹಂತಕ್ಕೆಂದು ಅನುಸರಿಸಬೇಕಾದ ಅಗತ್ಯವಿಲ್ಲ. ಆ ಷಟ್‌ಸ್ಥಲಗಳೆಂದರೆ- ೧. ಭಕ್ತ: ದೇವರ ಪರಿಕಲ್ಪನೆಯ ಗಾಢಜ್ಞಾನವನ್ನು ಪಡೆಯುವುದು; ೨. ಮಹೇಶ: ಪರಿಶುದ್ಧ ಹೃದಯದಿಂದ ಶರಣ ಸಮಾಜಕ್ಕೆ ಸೇವೆ ಸಲ್ಲಿಸಲು ಅರ್ಪಣಾಭಾವದ ಕ್ರಿಯೆಯನ್ನು ನಡೆಸುವುದು. ೩. ಪ್ರಸಾದಿ: ಸಮಸ್ತ ವಿಶ್ವದಲ್ಲೂ ಶಿವನನ್ನು ಕಾಣುವುದು, ವ್ಯಕ್ತಿ ಸಮಾಜದಲ್ಲಿ ಲೀನವಾಗುವುದು, ದೇಹವು ಭಗವಂತನ ಕೃಪೆಯೆಂದು ಭಾವಿಸುವುದು. ೪. ಪ್ರಾಣಲಿಂಗಿ: ಸ್ವಯಂಪೂರ್ಣತೆಯನ್ನು ಸಾಧಿಸಿ ಲಿಂಗಾಯತ ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ಅಂತರ್ಗತ ಮಾಡಿಕೊಳ್ಳುವುದು. ೫. ಶರಣ: ಪರಿಶುದ್ಧ ಲಿಂಗದಲ್ಲಿ ಲಿಂಗದ ದಿವ್ಯ ಅಸ್ತಿತ್ವವನ್ನು ಅನುಭವಿಸುವುದು. ೬. ಐಕ್ಯ: ಶಿವನೊಡನೆ ಅಂತಿಮವಾಗಿ (Fusion) ಬೆರೆಯುವುದು. ಬಹುತೇಕ ಜನ ಈ ಪೂರ್ಣ ಐಕ್ಯತೆಯನ್ನು ಸಾಧಿಸಬಲ್ಲರು ಎಂದು ನಿರೀಕ್ಷಿಸಲಾಗುವುದಿಲ್ಲ. ಆದರೆ ಮಾನವ ಪರಿಪೂರ್ಣತೆಯ ಪರಮಗುರಿ ಈ ಐಕ್ಯವಾಗಬೇಕು. ಆ ಐಕ್ಯವನ್ನು ಈ ದೇಹದಲ್ಲೇ ಇಹದಲ್ಲೇ ಸಾಧಿಸಬೇಕು. ಸಂಪ್ರದಾಯದ ಹಿಂದೂ ಧರ್ಮದಲ್ಲಿ ಇಹದ ಸಂಬಂಧವನ್ನು ತ್ಯಜಿಸಿ ಅಗೋಚರ ವಸ್ತುವಿನತ್ತ ತಿರುಗಿ ಮೋಕ್ಷ ಸಾಧಿಸುವುದು ಜೀವನದ ಗುರಿ ಎಂದಿರುವುದನ್ನು ಲಿಂಗಾಯತರು ನಿರಾಕರಿಸುತ್ತಾರೆ. ಸ್ವರ್ಗ ಅಥವಾ ಇಹದಾಚೆಯ

> *ಪೂರ್ಣ ಸತ್ಯದ ಬಗೆಗೆ ನನಗೆ ಅಜ್ಞಾನವಿದೆ. ಆದರೆ ನನ್ನ ಅಜ್ಞಾನದ ಎದುರು ನಾನು ವಿನಮ್ರನಾಗಿದ್ದೇನೆ. ನನ್ನ ಮಾನ-ಮನ್ನಣೆಗಳಿರುವುದು ಅದರಲ್ಲೇ.*
>
> **-ಖಲೀಲ್ ಗಿಬ್ರಾನ್**

ಜೀವನದ ಬಗೆಗೆ ಲಿಂಗಾಯತರಿಗೆ ಆಸಕ್ತಿಯಿಲ್ಲ. ಲಿಂಗಾಯತನೊಬ್ಬ ನಿಧನಹೊಂದಿದರೆ ಅವನು ಪೂರ್ಣವಾಗಿ ಶಿವೈಕ್ಯನಾದ ಎಂದೇ ಹೇಳಲಾಗುತ್ತದೆ.

ಕೆಲವು ಲಿಂಗಾಯತರಿಗೆ ಪೂರ್ವಜನ್ಮ, ಪುನರ್ಜನ್ಮಗಳಲ್ಲಿ ನಂಬಿಕೆ ಇರಬಹುದು. ಆದರೆ ಅವರಿಗೆ ಅವುಗಳಲ್ಲಿ ಆಸಕ್ತಿಯಿಲ್ಲ. ಹಿರೇಮಲ್ಲೂರು ಈಶ್ವರನ್ ಪ್ರಕಾರ, ಬಸವಣ್ಣ ಪುನರ್ಜನ್ಮದ ನಂಬಿಕೆಯನ್ನು ಸ್ಪಷ್ಟವಾಗಿ ನಿರಾಕರಿಸಿದ್ದಾನೆ. ಆದರೆ ಬಸವಣ್ಣ ತನ್ನ ಪೂರ್ವಜನ್ಮಗಳ ಬಗೆಗೆ-

"ಮುನ್ನಿನ ಜನ್ಮದಲ್ಲಿ ಗುರುಲಿಂಗಜಂಗಮವ ಪೂಜಿಸಲರಿಯದ ಕಾರಣ ಬಹುಜನ್ಮಕ್ಕೆ ತಂದು ಇಕ್ಕಿದೆಯಯ್ಯಾ ಎನ್ನನು" (ವ. ೮೩೩) ಎಂದಿದ್ದಾನೆ.

*"Because I did not know*
*to worship Guru, Linga and Jangama*
*in a former birth*
*You brought me back and put me*
*in several births (Basava - 833)"*

ಈ ಜನ್ಮದಲ್ಲಿ ಪಡೆದಿರುವ ಶಿವೈಕ್ಯದ ಅಂತರಿಕ ಅನುಭಾವಗಳನ್ನು ಶಬ್ದರೂಪದಲ್ಲಿ ತಿಳಿಸಲಾಗಿದೆ. ಇದು ಇತರ ಧರ್ಮಗಳ ರಹಸ್ಯಾರ್ಥಗಳನ್ನು ನೆನಪಿಗೆ ತರುತ್ತದೆ. ಅಂತರಿಕ ಅನುಭಾವದ ಪ್ರಾಮುಖ್ಯತೆಯನ್ನು ವಿಶೇಷವಾಗಿ ಒತ್ತಿ ಹೇಳಿದವರೆಂದರೆ ಅಲ್ಲಮಪ್ರಭು. ಅದೇ ಚನ್ನಬಸವಣ್ಣ ಬಾಹ್ಯನೇಮ ಮತ್ತು ಆಚರಣೆಗಳ ಅಗತ್ಯವನ್ನು ಒತ್ತಿ ಹೇಳುತ್ತಾನೆ. ಈ ಲಿಂಗಾಂಗ ಸಾಮರಸ್ಯದ ಅತ್ಯಂತ ಸುಂದರ ಭಾವವನ್ನು ಅಕ್ಕಮಹಾದೇವಿಯ ವಚನಗಳಲ್ಲಿ ಕಾಣಬಹುದು.

ಈ ಲಿಂಗಾಂಗ ಸಾಮರಸ್ಯವನ್ನು ವಿಶಿಷ್ಟಾದ್ವೈತ (ವಿಶೇಷ ಅದ್ವೈತತ್ವ) ಎಂದೂ ಕರೆಯಲಾಗಿದೆ. ಏಕೆಂದರೆ, ದೇವರು ಮತ್ತು ಜೀವರುಗಳ ಮಧ್ಯೆ ಕೆಲವು ವ್ಯತ್ಯಾಸಗಳನ್ನು ಎತ್ತಿಹಿಡಿಯಲಾಗಿದೆ. ಲಿಂಗಾಯತರಲ್ಲಿ ವ್ಯಕ್ತಿ 'ಶಿವೋಹಂ' (ನಾನು ದೇವರು) ಎನ್ನದೆ 'ದಾಸೋಹಂ' (ನಾನು ಸೇವಕ) ಎನ್ನಬೇಕು. ಅಂತೇ ಅವನು ಇಹಲೋಕದಲ್ಲಿ ತನ್ನ ಸಹಜೀವಿಗಳಿಗೆ ಒಳಿತನ್ನು ಮಾಡುವ ಮೂಲಕ ಭಗವಂತನಿಗೆ ಸೇವೆ ಸಲ್ಲಿಸುತ್ತಾನೆ.

ಲಿಂಗಾಯತ ಧರ್ಮದಲ್ಲಿ ಪಂಚಾಚಾರಗಳ (ಐದು ನೀತಿ ತತ್ವಗಳು) ರೂಪದಲ್ಲಿ ವೈಯಕ್ತಿಕ ಜೀವನಕ್ಕೆ ಅಗತ್ಯವಾದ ಒಂದು ನೀತಿ ಸಂಹಿತೆಯಿದೆ. ೧. ಲಿಂಗಾಚಾರ: ಅಂಗದ ಮೇಲೆ ಲಿಂಗ ಧರಿಸುವವರೆಲ್ಲರೂ ಸರಿಸಮಾನರು ಎಂಬುದನ್ನು ಒಪ್ಪಿಕೊಳ್ಳುವುದು; ಪ್ರತಿಯೊಬ್ಬನಲ್ಲೂ ಶಿವನಿದ್ದಾನೆ; ೨. ಸದಾಚಾರ: ವ್ಯಕ್ತಿ ಕೈಗೊಳ್ಳುವ ಕೆಲಸ ಅಥವಾ ವೃತ್ತಿ ನ್ಯಾಯಬದ್ಧವಾಗಿರಬೇಕು ಮತ್ತು ಸಮಾಜದ ಕ್ಷೇಮಕ್ಕೆ ಅದು ಕೊಡುಗೆಯಾಗಬೇಕು; ೩. ಶಿವಾಚಾರ: ಪರಿಶುದ್ಧ ಹೃದಯದಿಂದ ನಂಬಿದ ತತ್ವಗಳನ್ನು (tenets) ಪರಿಪಾಲಿಸುವುದು.







೪. ಗಣಾಚಾರ: ಇದನ್ನು ಈಶ್ವರನ್ ಮತ್ತು ವೇಣುಗೋಪಾಲ್ ಅವರು ವಿಭಿನ್ನವಾಗಿ ವಿವರಿಸಿದ್ದಾರೆ. ವೇಣುಗೋಪಾಲ್ ಪ್ರಕಾರ (P. 147) ಉಗ್ರವಾದದ ಪರಿಗ್ರಹ, ಶಾಬ್ದಿಕ ಕದನ, ದೈಹಿಕ ಮುಖಾಮುಖಿ ಅಥವಾ ಸುರಕ್ಷಿತ ಸ್ಥಳಗಮನ. ಸಮಾಜದ ಸಂಘಟನೆಗೆ (Integrity) ಉಂಟಾಗುವ ಬೆದರಿಕೆಗಳನ್ನು ಎದುರಿಸಲು, ಈಶ್ವರನ್, ಅದನ್ನು ಜಾತಿ ನಿರಾಕರಣೆ ಮತ್ತು ಜೀವನದ ಹಂತಗಳೆಂದು ವಿವರಿಸುತ್ತಾರೆ. ೫. ಭೃತ್ಯಾಚಾರ: ಈಶ್ವರನ್ ಅವರ ಪ್ರಕಾರ ಮುಖ್ಯವಾಗಿ ವಿನಯ. ವೇಣುಗೋಪಾಲ್ ಅವರು "ಧಾರ್ಮಿಕ ಸಮಾಜವನ್ನು ನಿರ್ವಹಣೆ ಮಾಡಲು ದಾಸೋಹದ ಕ್ರಿಯಾತ್ಮಕ ಅನುಷ್ಠಾನ-ಇತರರ ಸೇವೆ. ಕಾಯಕದಿಂದ ಬಂದುದರಲ್ಲಿ ಒಂದು ಭಾಗವನ್ನು ಆಧರಿಸಿರುತ್ತದೆ" ಎಂದು ಅದನ್ನು ವಿವರಿಸಿದ್ದಾರೆ.

ಏನೇ ಇದ್ದರೂ, ಕಾಯಕ ಮತ್ತು ದಾಸೋಹಗಳು ಬ್ರಾಹ್ಮಣ ಸಂಪ್ರದಾಯದ ವಿರುದ್ಧ ಗುರಿಯಿಟ್ಟ ಬಹುಮುಖ್ಯ ಪರಿಕಲ್ಪನೆಗಳು. ಕಾಯಕವೆಂದರೆ ಸಹಜೀವಿಗಳ ಸೇವೆಯಲ್ಲಿ ಸಾಮಾನ್ಯ ಜೀವನದಲ್ಲಿ ಮಾಡುವ ಕೆಲಸ. ಕೆಲವು ಸಂದರ್ಭಗಳಲ್ಲಿ ಉದಾ: ಈಶ್ವರನ್ - ಕಾಯಕವನ್ನು ವೃತ್ತಿಯ ಪ್ರಾಟೆಸ್ಟೆಂಟ್ ಪರಿಕಲ್ಪನೆಗೆ ಹೋಲಿಸಿದ್ದಾರೆ. ಈ ಎರಡು ಪರಿಕಲ್ಪನೆಗಳೂ ಬಹುಮಟ್ಟಿಗೆ ಒಂದೇ ಎನ್ನುತ್ತಾರೆ ಈಶ್ವರನ್. ಎಲ್ಲ ಬಗೆಯ ವೃತ್ತಿಗಳೂ ಪವಿತ್ರವೆಂದು ಗೌರವಿಸಲ್ಪಡಬೇಕು; ಇಷ್ಟಲಿಂಗದಿಂದ ಅವುಗಳನ್ನು ಪವಿತ್ರಗೊಳಿಸಬೇಕು. ಇದು ಸಾಂಪ್ರದಾಯಿಕ ಬ್ರಾಹ್ಮಣ ವೃತ್ತಿಶ್ರೇಣಿ ವ್ಯವಸ್ಥೆಗೆ ವಿರುದ್ಧವಾದ ನಿಲುವು.

ಲಿಂಗಾಯತರು ಕಾಯಕದಿಂದ ಬಂದ ಆದಾಯಕ್ಕೆ ಅನುಗುಣವಾಗಿ ತಮ್ಮ ಸಮಾಜಕ್ಕೆ ಸೇವೆ ಸಲ್ಲಿಸಬೇಕು ಎನ್ನುವುದು ದಾಸೋಹದಲ್ಲಿ ಅಂತರ್ಗತವಾಗಿದೆ. ತನ್ನ ಜೀವನಕ್ಕೆ ಅಗತ್ಯವಿರುವುದಕ್ಕಿಂತ ಹೆಚ್ಚಿನದನ್ನು ಇಟ್ಟುಕೊಳ್ಳಕೂಡದು. ದಾಸೋಹವೆಂದರೆ ಕೇವಲ ಲಿಂಗಾಯತ ಸಮುದಾಯಕ್ಕೆ ಮಾತ್ರವಲ್ಲದೆ ಪ್ರತಿಯೊಬ್ಬ ಮಾನವ ಜೀವಿಗೂ ಸಲ್ಲಿಸುವ ಸೇವೆ ಎಂದೂ ಹೇಳಲಾಗಿದೆ.

ಅಷ್ಟಾವರಣಗಳೆಂದರೆ (ಎಂಟು ಪೂರಕ ಸಾಧನಗಳು) ಗುರು, ಲಿಂಗ, ಜಂಗಮ, ವಿಭೂತಿ, ಪಾದೋದಕ, ಪ್ರಸಾದ, ರುದ್ರಾಕ್ಷಿ ಮತ್ತು ಮಂತ್ರ. ಮೇಲೆ ಉಲ್ಲೇಖಿಸಿದ ಬಸವಣ್ಣನ ವಚನದಲ್ಲಿ ಇವುಗಳಲ್ಲಿ ಐದರ ಪ್ರಸ್ತಾಪವಿದೆ. ಉಲ್ಲೇಖಿತ ವಚನದ ಆರಂಭ ಹೀಗೆ ಮುಂದುವರಿಯುತ್ತದೆ;

*ಎನಗೆ ಗುರುಪಥವ ತೋರಿದವರಾರು?*
*ಲಿಂಗಪಥವ ತೋರಿದವರಾರು?*
*ಜಂಗಮಪಥವ ತೋರಿದವರಾರು?*
*ಪಾದೋದಕ ಪ್ರಸಾದವ ತೋರಿದವರಾರು?*
*ತೋರುವ ಮನವೆ ನೀವೆಂದರಿತೆ,*
*ಎನಗಿನ್ನಾವ ಭಯವಿಲ್ಲ ಕೂಡಲಸಂಗಮದೇವಾ.*

*Who is it who showed me the Gurupath?*
*Who is it who showed me the Lingapath?*
*Who is it who showed me the Jangamapath?*
*Who is it who showed me the prasada and Padodaka?*
*I have known that the spirit thou showed all these is but thyself*
*Henceforth, O, Kudala Sangamadewa, I have no fear!*

ಗುರು, ಲಿಂಗ ಮತ್ತು ಜಂಗಮ ಮೂಲಭೂತವಾದವು. ಆದರೆ ಅವುಗಳನ್ನು ಬೇರ್ಪಡಿಸಿ ನೋಡುವುದು ಕಷ್ಟ. ದೇವರು ಎಲ್ಲ ಕಡೆಯೂ ಇರುವುದರಿಂದ ಪ್ರತಿಯೊಂದು ಪ್ರತಿಯೊಂದರೊಡನೆಯೂ ಒಂದೇ ಆಗಿರುತ್ತದೆ.

*The guru showed me and I saw the guru, the linga and the Jangama are one,*
*and having shown Guheswaralinga on my palm.*
*(Allamaprabhudeva-Iswaran-1992-p. 227)*

ಸಮಸ್ತವೂ ದೈವವೇ. ಆ ದೈವಕ್ಕೆ ನಾಮ-ರೂಪಗಳಿಲ್ಲ, ಅದು ಶೂನ್ಯ (ಬಯಲು). ಆದರೆ ನಮಗೆ ಕುರುಹುಗಳು ಬೇಕಾಗುತ್ತವೆ. ಲಿಂಗಾಯತರ ಮುಖ್ಯ ಕುರುಹೆಂದರೆ ಇಷ್ಟಲಿಂಗ. ಅದನ್ನು ಲಿಂಗಾಯತರು ನಿರಂತರವಾಗಿ ತಮ್ಮೊಡನೆ ಇಟ್ಟುಕೊಂಡಿರಬೇಕು. ಆದರೆ ಇಷ್ಟಲಿಂಗ ಕೊಟ್ಟು ದೀಕ್ಷಾ ಕಾರ್ಯ ನೆರವೇರಿಸುವ ಗುರುಗಳು ಬೇಕಾಗುತ್ತಾರೆ. ಭಾರತದಲ್ಲಿ ಬೋಧಕರಿಗೆ ಇರುವ ಪರಂಪರೆಯ ಹೆಸರು 'ಗುರು'. ಲಿಂಗಾಯತ ಸಂದೇಶ ಪ್ರಸಾರದ ದೃಷ್ಟಿಯಿಂದ ಬಸವಣ್ಣ ಜಂಗಮಭಿಕ್ಷು ಕ್ರಮವನ್ನು ಆರಂಭಿಸಿದ.

ಏನೇ ಇರಲಿ, ಗುರು ಮತ್ತು ಜಂಗಮರ ನಡುವಿನ ಸಂಬಂಧಗಳು ಮುಂದೆ ತುಂಬಾ ಗೊಂದಲಕ್ಕೊಳಗಾದವು. ಮೂಲ ಜಂಗಮರು ಸ್ಥಿರ ಮತ್ತು ಚರ ಜಂಗಮರೆಂದು ಒಡೆದು ಭಾಗವಾದರು. ಈ ಎರಡು ಗುಂಪುಗಳು ಮತ್ತೆ ಅನೇಕ ಉಪ ಗುಂಪುಗಳಾಗಿ ಒಡೆದವು. ಗುರುಗಳು ಅಭಿವೃದ್ಧಿಯ ಮುಂದಾಳುಗಳಾದರು. ಸಾಮಾನ್ಯವಾಗಿ ಅವರು

> *ವ್ಯಕ್ತಿಯ ಮಹತ್ವವಿರುವುದು-ಅವನು ಏನನ್ನು ಸಾಧಿಸಿದ್ದಾನೆ ಎನ್ನುವುದರಲ್ಲಿ ಇಲ್ಲ; ಅವನು ಏನನ್ನು ಸಾಧಿಸಲು ಹಂಬಲಿಸುತ್ತಿದ್ದಾನೆ ಎನ್ನುವುದರಲ್ಲಿ!*
>
> **-ಖಲೀಲ್ ಗಿಬ್ರಾನ್**

ಮಠಾಧಿಪತಿಗಳಾಗಿದ್ದರು. ಅವರು ಜಂಗಮರಿಗಿಂತ ಹೆಚ್ಚು ಪ್ರಭಾವಿಶಾಲಿಗಳಾದರು. ಗುರುಗಳು ಮುಖ್ಯಸ್ಥರಾಗಿದ್ದ ಮಠಗಳಲ್ಲಿನ ಸ್ಥಾವರಲಿಂಗಗಳು ಇಷ್ಟಲಿಂಗಕ್ಕಿಂತ ಹೆಚ್ಚು ಮಹತ್ವ ಪಡೆದವು. ಸಂಚಾರಿ ಇಷ್ಟಲಿಂಗಗಳೇ ಜಂಗಮವೆನಿಸಿದವು. ದೇವಾಲಯ ಪೂಜೆಯನ್ನು



ಬಸವಣ್ಣ ನಿರಾಕರಿಸಿದ್ದರೂ, ಸ್ಥಾವರ ಲಿಂಗಗಳಿಗೆ ದೇವಾಲಯಗಳನ್ನು ನಿರ್ಮಿಸಲಾಯಿತು.

ಜಂಗಮರಲ್ಲಿ ಬ್ರಹ್ಮಚಾರಿಗಳು ಮತ್ತು ಗೃಹಸ್ಥರೂ ಇದ್ದಾರೆ. ತಾತ್ವಿಕವಾಗಿ ಒಬ್ಬ ವ್ಯಕ್ತಿ ಸಾಧನೆಯಿಂದ (achievement) ಅಥವಾ ನೇಮಕದಿಂದ (appointment) ಜಂಗಮನಾಗಬಲ್ಲ. ಹುಟ್ಟಿನಿಂದ ಹಕ್ಕು ಬರುವುದಿಲ್ಲ. ಆದರೆ ನಮ್ಮ ಸ್ನೇಹಿತ ಯಳಸಂಗಿ ಅವರು ತಾವು ಜನ್ಮತಃ ಜಂಗಮರೆಂದು ಹೇಳಿದರು. ತಾವು ಚಿಕ್ಕ ಬಾಲಕರಾಗಿದ್ದಾಗ ತಮಗಿಂತ ವಯಸ್ಸಾದವರು ಹೇಗೆ ತಮಗೆ ನಮಸ್ಕಾರ ಮಾಡಿ ಗೌರವ ಸಲ್ಲಿಸುತ್ತಿದ್ದರೆಂಬುದನ್ನು ಜ್ಞಾಪಿಸಿಕೊಳ್ಳುವ ಅವರು, "ಆದರೆ ನಾನು ನಿಶ್ಚಿತವಾಗಿ ಗುರುವಲ್ಲ" ಎಂದರು.

'ವಿಭೂತಿ' ಎಂದರೆ ಪವಿತ್ರ ಬೂದಿ. ಹಣೆಯ ಮೇಲಿನ ಈ ಬಿಳಿ ಬೂದಿಯ ಮೂರು ಪಟ್ಟಿಗಳಿಂದ ಶಿವಭಕ್ತರನ್ನು ಗುರುತಿಸಲಾಗುತ್ತದೆ. 'ಪ್ರಸಾದ'ವೆಂದರೆ ಗುರುವಿನಿಂದ ದೇವರಿಗೆ ಅರ್ಪಿಸಲ್ಪಟ್ಟ ನಂತರ ಭಕ್ತರು ಸೇವಿಸುವ ಆಹಾರ. ಇದು ಗುರು ಮತ್ತು ಶಿಷ್ಯರ ಆಂತರಿಕ ಅವಲಂಬನೆಯ ಸಂಕೇತವಾಗಿದೆ. ಹಾಗೆಯೇ 'ಪಾದೋದಕ'ವೆಂದರೆ ಶಿಷ್ಯನು ತನ್ನ ಗುರುವಿನ ಪಾದವನ್ನು ತೊಳೆದ ಜಲ. 'ರುದ್ರಾಕ್ಷಿ' ಇದನ್ನೇ ಶಿವನ ನೇತ್ರವೆನ್ನುತ್ತಾರೆ. ಕೊರಳಲ್ಲಿ ರುದ್ರಾಕ್ಷಿ ಸರ ಮತ್ತು ಹಣೆಯಲ್ಲಿ ವಿಭೂತಿ ಪಟ್ಟಿ ಧರಿಸುವ ಶಿವಪೂಜಕ ತನ್ನನ್ನು ಶಿವಸ್ವರೂಪಿಯೆಂದೇ ಭಾವಿಸುತ್ತಾನೆ. 'ಮಂತ್ರ' ಎನ್ನುವುದು ಒಂದು ಪವಿತ್ರ ಶಬ್ದ. ಇದನ್ನು ಧ್ಯಾನ ಮತ್ತು ಪೂಜೆಯ ಸಂದರ್ಭದಲ್ಲಿ ಬಳಸಲಾಗುತ್ತದೆ. ಲಿಂಗಾಯತರಿಗೆ ಅದು 'ನಮಃ ಶಿವಾಯ' (ಶಿವ ನಮನ).

> *ನನಗೆ ಏಕಾಂಗಿತನ ಹುಟ್ಟಿದ್ದು, ಜನ ನನ್ನ ಮಾತಿನ*
> *ದೋಷಗಳನ್ನು ಹೊಗಳಿದಾಗ; ಮತ್ತು ನನ್ನ ಮೌನದ*
> *ಮೌಲ್ಯಗಳನ್ನು ತೆಗಳಿದಾಗ!*
> -ಖಲೀಲ್ ಗಿಬ್ರಾನ್

ಭಾರತದಲ್ಲಿ ಯಾವಾಗಲೂ ಒಂದು ಮುಖ್ಯವಾದ ವಿಷಯವೆಂದರೆ ಮಡಿ-ಮೈಲಿಗೆ. ಈ ಬಗೆಗೆ ಸ್ವಲ್ಪ ಹೆಚ್ಚಿನ ವಿವರಣೆ ಬೇಕಾಗುತ್ತದೆ. ಬಸವಣ್ಣ, ಜಾತಿ ವ್ಯವಸ್ಥೆಯೊಡನೆ ನಿಕಟ ಸಂಬಂಧವಿರುವ ಬ್ರಾಹ್ಮಣ ಹಿಂದೂ ಸಂಪ್ರದಾಯದಲ್ಲಿ ರೂಢಿಯಲ್ಲಿದ್ದ ಮಡಿ-ಮೈಲಿಗೆಗಳ ನಿಯಮಗಳನ್ನು ನಿರಾಕರಿಸಿದ. ಅಂದಿನ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಮೇಲು ಜಾತಿಯವರು ಕೆಳಜಾತಿಯವರನ್ನು ಮುಟ್ಟುವುದು ಮೈಲಿಗೆ ಎನಿಸಿಕೊಂಡಿತ್ತು ಮತ್ತು ಆ ಮೈಲಿಗೆಯನ್ನು ಕಳೆದುಕೊಂಡು ಮತ್ತೆ ಮಡಿಯಾಗಲು ನಾನಾ ಸಂಸ್ಕಾರ ಕ್ರಿಯೆಗಳನ್ನು ನಡೆಸಬೇಕಾಗಿತ್ತು. ಆದರೆ ಬಸವಣ್ಣನ ಪ್ರಕಾರ ಯಾರೇ ಇರಲಿ ಲಿಂಗ, ವಯಸ್ಸು ಮತ್ತು ವೃತ್ತಿಗಳ ಬೇಧವಿಲ್ಲದೆ ಇಷ್ಟಲಿಂಗ ಧರಿಸಿದವರೆಲ್ಲಾ ಪರಿಶುದ್ಧರೆಂದು ಪರಿಗಣಿಸಲ್ಪಟ್ಟಿದ್ದರು. ಅವನಿಗೆ ಆಚರಣ ಸಮಾನತೆ, ಕಾರ್ಯ ಪಾವಿತ್ರ್ಯತೆ ಮತ್ತು ಸಾರ್ವತ್ರಿಕ ಪರಿಶುದ್ಧತೆಯ ಒಂದು ಹೊಸ ಸಮಾಜ ವ್ಯವಸ್ಥೆ ಬೇಕಾಗಿತ್ತು.

ನಂತರ ಲಿಂಗಾಯತ ಶಾಸ್ತ್ರಜ್ಞಾನಿಗಳು ೧. ಜನನ, ೨. ಮರಣ, ೩. ಮುಟ್ಟು, ೪. ಎಂಜಲು ಮತ್ತು ೫. ಜಾತಿ ಸಂಪರ್ಕ (ಎಂದರೆ ಕೆಳಜಾತಿಯವರನ್ನು ಮುಟ್ಟುವುದು) ಇವುಗಳಿಂದ ಆಗುತ್ತದೆ ಎಂದು ಹೇಳಲಾಗುವ ಐದು ಮೈಲಿಗೆಗಳ ಬಗೆಗೆ ಲಕ್ಷ್ಯ ಕೊಡಬಾರದೆಂದು ತಮ್ಮ ಅನುಯಾಯಿಗಳಿಗೆ ಹೇಳಿದ್ದಾರೆ. ಇಷ್ಟಲಿಂಗವು ವಿಶ್ವಚೈತನ್ಯದ ಸಂಕೇತವಾಗಿದ್ದು, ಅದಕ್ಕೆ ಸಲ್ಲಿಸುವ ಪೂಜೆ, ಸಾಂಪ್ರದಾಯಿಕ ಪದ್ಧತಿಯಲ್ಲಿ ಶಾಸ್ತ್ರ ಸಮ್ಮತವಾಗಿರುವ ಈ ಎಲ್ಲ ರೀತಿಯ ಮೈಲಿಗೆಗಳನ್ನೂ ಕಳೆದು ಪವಿತ್ರಗೊಳಿಸುತ್ತದೆ.

ಏನೇ ಇದ್ದರೂ, ಊಟೋಪಚಾರದ ನಿಯಮಗಳೂ ಮುಖ್ಯವಾಗಿವೆ. "ಲಿಂಗಾಯತರು ಬಹುಮಟ್ಟಿಗೆ ಜೀವನದ ಪ್ರತಿಯೊಂದು ವಿಷಯದಲ್ಲೂ ತಮ್ಮದೇ ಆದ ನಡವಳಿಕೆಯ ಸಂಹಿತೆ ಮತ್ತು ಸೂತ್ರಗಳನ್ನು ರೂಪಿಸಿಕೊಂಡಿದ್ದಾರೆ. ಅವರು ಪೂರ್ಣ ಸಸ್ಯಾಹಾರಿಗಳಾಗಿದ್ದು ಮಾಂಸಾಹಾರವನ್ನು ಸಹಿಸಿಕೊಳ್ಳುವ ಬೇರೆ ಯಾವುದೇ ಜಾತಿ-ಜನಾಂಗದವರೊಡನೆ ಕೂಡಿ ಊಟ ಮಾಡುವುದಿಲ್ಲ. ಈ ವಿಷಯದಲ್ಲಿ ಲಿಂಗಾಯತರು ಬ್ರಾಹ್ಮಣರಿಗಿಂತಲೂ ಹೆಚ್ಚು ಕಟ್ಟುನಿಟ್ಟು ಎಂದು ಹೇಳಬಹುದು" ಎಂದು ಈಶ್ವರನ್ ಅವರು ಬರೆಯುತ್ತಾರೆ. ಈ ಕಟ್ಟುನಿಟ್ಟಿನ ಸಸ್ಯಾಹಾರ ಪದ್ಧತಿಗೆ ಲಿಂಗಾಯತ ಧರ್ಮಸ್ಥಾಪಕರ ಪ್ರಾಣಿಬಲಿಯ ನಿರಾಕರಣೆಯೇ ಕಾರಣವಾಗಿದೆ. "ಕೆಲವು ಕಡೆ ಲಿಂಗಧಾರಿಗಳಾದ ಸಸ್ಯಾಹಾರಿ ಲಿಂಗಾಯತರು ಜಾತಿ ಶ್ರೇಣಿಯಲ್ಲಿ ಕೆಳವರ್ಗವೆನಿಸಿರುವ ಮಾಂಸಾಹಾರಿ ವೀರಶೈವರಿಗಿಂತ ಭಿನ್ನ" ಎಂದು ವೇಣುಗೋಪಾಲ ಅವರು ಬರೆಯುತ್ತಾರೆ.

ವಾಸ್ತವವಾಗಿ ಲಿಂಗಾಯತರು ಸಂಪೂರ್ಣವಾಗಿ ಮದ್ಯಪಾನದಿಂದ ದೂರವಿರುತ್ತಾರೆ. ಲಿಂಗಾಯತರ ಜೀವನದ ನಮ್ಮ ಅಧ್ಯಯನದಲ್ಲಿ ನಾವು ಕಂಡ ಅನೇಕ ವೈರುಧ್ಯಗಳಿಗೆ ಮೈಲಿಗೆ ಬಗೆಗಿರುವ ಅವರ ಮನೋಭಾವಗಳು ಉದಾಹರಣೆಯಾಗಿವೆ. "ಜನ್ಮತಃ ಜಂಗಮರಾಗಿದ್ದೂ ನಮ್ಮ ಸ್ನೇಹಿತ ಯಳಸಂಗಿ ಅವರು ತಾವು ಮತ್ತು ತಮ್ಮ ಹೆಂಡತಿ ಲಿಂಗಾಯತ ಜಾತಿಯೊಳಗೇ ಬೇರೆ ಬೇರೆ ಉಪಗುಂಪುಗಳಿಗೆ ಸೇರಿದವರೆಂದು ತಿಳಿಸಿದರು. ಅವರಿಬ್ಬರಿಗೂ ಬೇರೆ ಬೇರೆ ನಿಯಮಗಳಿವೆ. ಉದಾ: ಚರ್ಮದ ಬಗೆಗೆ ಇರುವ ಮನೋಭಾವ. ಹೆಂಡತಿಯ ಪ್ರಕಾರ, ಚರ್ಮದ ಪಾದರಕ್ಷೆ ಹಾಕಿಕೊಂಡು ಅಡಿಗೆ ಮನೆಯೊಳಕ್ಕೆ ಪ್ರವೇಶಿಸುವಂತಿಲ್ಲ. ಆದರೆ ಗಂಡನ ದೃಷ್ಟಿಯಲ್ಲಿ ಅದು ಸಮಸ್ಯೆಯಾಗಿಲ್ಲ. ಬಸವಣ್ಣ ಇಷ್ಟಲಿಂಗ ಎಲ್ಲ ಮೈಲಿಗೆಗಳನ್ನು ಕಳೆದು ಪವಿತ್ರಗೊಳಿಸುತ್ತದೆ ಎಂದು ಹೇಳಿದ ಮಾತುಗಳಿಗೂ ಈಗಿನ ಮಡಿ-ಮೈಲಿಗೆಗಳ ನಿಯಮಗಳಿಗೂ ಹೇಗೆ ಹೊಂದಾಣಿಕೆಯಾಗುತ್ತದೆ ಎಂದು ನಾವು ಕೇಳಿದಾಗ ಆ ದಂಪತಿಗಳು ತಾವೇ ಪರಸ್ಪರ ಚರ್ಚೆಗೆ







ತೊಡಗಿದರು. ಗಂಡನಿಗಿಂತ ಕಟ್ಟುನಿಟ್ಟಿನ ನಿಯಮಗಳ ಹೆಂಡತಿ "ನಿಯಮಗಳ ಅನುಸರಣೆಯಲ್ಲಿ ನಮ್ಮ ಮನೆತನದ ಹಿಂದಿನವರಲ್ಲಿದ್ದಷ್ಟು ಶ್ರದ್ಧೆ ನಮ್ಮ ಕಾಲದಲ್ಲಿಲ್ಲ" ಎಂದು ಹೇಳಿದರು.

ಇನ್ನು ಲಿಂಗಾಯತ ಆರಾಧನೆ ಕುರಿತು ಕೆಲವು ವಿಚಾರಗಳು. ಈ ಸಂಬಂಧ ಆಗಾಗ ಉಲ್ಲೇಖಿಸಲಾಗುವ ಬಸವಣ್ಣನ ಒಂದು ಪ್ರಸಿದ್ಧ ವಚನವಿದೆ.

*"ಉಳ್ಳವರು ಶಿವಾಲಯವ ಮಾಡುವರು*
*ನಾನೇನ ಮಾಡಲಯ್ಯ ಬಡವನು*
*ಎನ್ನ ಕಾಲೇ ಕಂಬ, ದೇಹವೇ ದೇಗುಲ*
*ಶಿರವೇ ಹೊನ್ನ ಕಳಸವಯ್ಯಾ*
*ಕೇಳು ಕೂಡಲಸಂಗಮದೇವಾ,*
*ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"*

*(ಬಸವಣ್ಣ-ವ. ೮೨೦)*

*"The rich will make temples for Shiva*
*What shall I a poor man do ?*
*My legs are pillars, the body a Shrine*
*The head Cupola of gold*
*Listen, O lord of meeting rivers*
*things standing shall fall*
*But the moving ever shall stay"*

*(Basavanna-V. 820)*

ಶ್ರೀಮಂತರಿಂದ ನಿರ್ಮಿಸಲ್ಪಟ್ಟ ದೇವಾಲಯಗಳಿಂದ ದೂರವಿರಬೇಕು. ನಿಜವಾದ ದೇವ-ದೇಗುಲವೆಂದರೆ ಜಂಗಮವಾಗಿರುವ ಮಾನವನ ದೇಹವೆ. ಈ ದೇಹದ ಮೇಲೆ ದೇವರ ಸಾನ್ನಿಧ್ಯದ ಸಂಕೇತವಾಗಿ ಸದಾ ಇಷ್ಟಲಿಂಗವನ್ನು ಧರಿಸಿರಬೇಕು.

ದೇವರನ್ನು ಎಲ್ಲ ಕಡೆಯೂ ಪೂಜಿಸಬೇಕು. ಆದರೆ ಅದು ರೂಪರಹಿತ ದೇವರ ಸಂಕೇತವಾದ ಇಷ್ಟಲಿಂಗದ ಪೂಜೆಯಾಗಿರಬೇಕು. ಆದರೆ ಕೆಲವು ಲಿಂಗಾಯತರಲ್ಲಿ ಸಂಪ್ರದಾಯದ ವಿಗ್ರಹಗಳು, ಶಿವ, ಪಾರ್ವತಿ, ಗಣೇಶ ಇತ್ಯಾದಿ ಮೂರ್ತಿಗಳಿರುವುದು ಕಂಡುಬರುತ್ತದೆ. ಇದು ಅಷ್ಟು ಮುಖ್ಯವಲ್ಲವೆಂದು ನಮಗೆ ತಿಳಿಸಲಾಯಿತು.

ಮಹತ್ವದ ವಿಷಯವೆಂದರೆ, ಸೃಷ್ಟಿಯ ಸಕಲ ವಸ್ತುಗಳಲ್ಲೂ ದೇವರನ್ನು ಕಾಣುವುದು. ಇಷ್ಟಲಿಂಗವು ಪ್ರಧಾನ ಪ್ರತೀಕವಾದರೂ ಅದು ಇತರ ಸಂಕೇತಗಳನ್ನು ಬಳಸಲು ಜನರಿಗೆ ಅಡ್ಡಿಯಾಗಿಲ್ಲ. ಹೀಗಾಗಿ ಸಾಂಪ್ರದಾಯಿಕ ಹಿಂದುತ್ವ ಮತ್ತು ಅನುಷ್ಠಾನ ಲಿಂಗಾಯತತ್ವದ ಮಧ್ಯೆ ಇರುವ ಗಡಿರೇಖೆಗಳು ಅನೇಕ ವೇಳೆ ಅಸ್ಪಷ್ಟವಾಗುತ್ತವೆ.

(ಮುಂದುವರಿಯುವುದು)

---

# ರಾಜ್ಯಮಟ್ಟದ ಚಿಂತನ ಸಂಕಿರಣ

ಕಳೆದ ಇಪ್ಪತ್ತು ವರ್ಷಗಳಿಂದ ಜನಸಮುದಾಯದಲ್ಲಿ ವೈಚಾರಿಕ ಪ್ರಜ್ಞೆ ಮೂಡಿಸಲು ಸಮ್ಮೇಳನ, ವಿಚಾರಗೋಷ್ಠಿ, ಗ್ರಂಥಪ್ರಕಟಣೆ, ಉಪನ್ಯಾಸ, ಸಂಗೀತ-ನೃತ್ಯ ಇತ್ಯಾದಿ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿರುವ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಹೆಚ್.ಎಂ. ಮಲ್ಲಿಕಾರ್ಜುನಪ್ಪ ಸಮಾಜ ಸೇವಾ ಪ್ರತಿಷ್ಠಾನದ ಸಹಯೋಗದಲ್ಲಿ ಇದೇ ದಿನಾಂಕ ೮.೫.೨೦೦೫ರಂದು ಶಿವಮೊಗ್ಗದ ಕುವೆಂಪು ರಂಗಮಂದಿರದಲ್ಲಿ "ಆತಂಕದ ಸಮಾಜದ ನಿರೀಕ್ಷೆಗಳು" ಎಂಬ ವಿಷಯ ಕುರಿತ ರಾಜ್ಯಮಟ್ಟದ ಚಿಂತನ ಸಂಕಿರಣವನ್ನು ಏರ್ಪಡಿಸಿದೆ.

ಪ್ರಸ್ತುತ ಪರಿಸ್ಥಿತಿಯಲ್ಲಿ ಹಲವಾರು ಒತ್ತಡಗಳಿಗೆ ಸಿಲುಕಿರುವ ಇಂದಿನ ಸಮಾಜ ತನ್ನ ನೆಮ್ಮದಿಗೆ ಇಟ್ಟುಕೊಂಡಿರುವ ನಿರೀಕ್ಷೆಯೇನು ಎಂಬ ಬಗೆಗೆ ಗಂಭೀರ ಚಿಂತನೆ ನಡೆಸುವುದು ಈ ಸಂಕಿರಣದ ಆಶಯವಾಗಿದೆ. ಬೆಳಗ್ಗೆ ೧೦.೩೦ ರಿಂದ ಸಂಜೆ ೬.೩೦ರವರೆಗೆ ಇಡೀ ದಿನ ನಡೆಯುವ ಈ ಸಂಕಿರಣವನ್ನು ಕೇಂದ್ರದ ಯೋಜನಾ ರಾಜ್ಯಸಚಿವ ಶ್ರೀ ಎಂ.ವಿ. ರಾಜಶೇಖರನ್ ಅವರು ಉದ್ಘಾಟಿಸುತ್ತಾರೆ. ಕರ್ನಾಟಕ ಮತ್ತು ಕೇರಳ ಉಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಡಾ. ವಿ.ಎಸ್. ಮಳೀಮಠ ಅವರು ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸುತ್ತಾರೆ.

ರಾಜ್ಯ ವಿಧಾನ ಪರಿಷತ್ತಿನ ಮಾಜಿ ಸಭಾಪತಿಗಳಾದ ಶ್ರೀ ಬಿ.ಎಲ್. ಶಂಕರ್ ಅವರ ಅಧ್ಯಕ್ಷತೆಯಲ್ಲಿ ನಡೆಯುವ ಮೊದಲ ಗೋಷ್ಠಿಯಲ್ಲಿ ಪರಿಸರತಜ್ಞರೂ ರಾಜ್ಯದ ನಿವೃತ್ತ ಮುಖ್ಯ ಅರಣ್ಯಸಂರಕ್ಷಣಾಧಿಕಾರಿಗಳೂ ಆದ ಡಾ. ಎ.ಎನ್. ಯಲ್ಲಪ್ಪರೆಡ್ಡಿ ಮತ್ತು ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಡಾ. ಸಿ.ಕೆ. ರೇಣುಕಾರ್ಯ ಅವರು ಪರಿಸರ ಮತ್ತು ಆರ್ಥಿಕ ನಿರೀಕ್ಷೆಗಳನ್ನು ಕುರಿತು ಚಿಂತನೆ ನಡೆಸುತ್ತಾರೆ.

ರಾಜ್ಯದ ಮುಖ್ಯ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ನ್ಯಾಯಮೂರ್ತಿ ಶ್ರೀ ಎ.ಜೆ. ಸದಾಶಿವ ಅವರ ಅಧ್ಯಕ್ಷತೆಯಲ್ಲಿ ನಡೆಯುವ ಎರಡನೇ ಗೋಷ್ಠಿಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ತತ್ವಶಾಸ್ತ್ರ ಪ್ರಾಧ್ಯಾಪಕರಾದ ಡಾ. ಎನ್.ಜಿ. ಮಹಾದೇವಪ್ಪ ಮತ್ತು ಶಿಕ್ಷಣ ವಿಭಾಗದ ಡಾ. ಶ್ರೀಪಾದ ಬೋಳಶೆಟ್ಟಿ ಅವರು ಧಾರ್ಮಿಕ ಮತ್ತು ಶೈಕ್ಷಣಿಕ ನಿರೀಕ್ಷೆಗಳನ್ನು ಕುರಿತು ಪ್ರಬಂಧಗಳನ್ನು ಮಂಡಿಸಲಿದ್ದಾರೆ.

ಸಂಜೆ ೫.೦೦ಕ್ಕೆ ಮಾಜಿ ಸಚಿವರಾದ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸುತ್ತಾರೆ. ಕುವೆಂಪು ವಿಶ್ವವಿದ್ಯಾಲಯದ ಕುಲಪತಿ ಡಾ. ಕೆ. ಚಿದಾನಂದಗೌಡ ಅವರು ಸಮಾರೋಪ ಭಾಷಣ ಮಾಡುತ್ತಾರೆ. ಸಂಕಿರಣದ ನಂತರ ಸಂಜೆ ೬.೩೦ಕ್ಕೆ ಸಾಂಸ್ಕೃತಿಕ ಕಾರ್ಯಕ್ರಮ ಏರ್ಪಡಿಸಿದೆ.



# ಗಾಂಧೀಜಿ ಕಂಡ ಸತ್ಯ

-ರಂಜಾನ್ ದರ್ಗಾ, ಗುಲ್ಬರ್ಗ

ಗಾಂಧೀಜಿ ಸಂತಗುಣವನ್ನು ಹೊಂದಿರುವುದರಿಂದ ಅವರು ಅಧ್ಯಾತ್ಮ ಲೋಕದಲ್ಲಿರಬೇಕೆಂದು ಸೂಫಿ ಸಂತರೊಬ್ಬರ ಆಶಯವಾಗಿತ್ತು. ಗಾಂಧೀಜಿಯವರಿಗೆ ಈ ಕುರಿತು ಮನವರಿಕೆ ಮಾಡುವ ಉದ್ದೇಶದಿಂದ ಅವರಿದ್ದಲ್ಲಿಗೆ ಹೋದರು. ಆಗ ಗಾಂಧೀಜಿಯವರ ಆರೋಗ್ಯ ಹದಗೆಟ್ಟಿತ್ತು. ಬೆಂಗಳೂರು ಬಳಿಯ ನಂದಿಬೆಟ್ಟದ ಆರೋಗ್ಯಧಾಮದಲ್ಲಿ ಉಳಿದುಕೊಳ್ಳುವುದಾಗಿಯೂ ತಾವು ಅಲ್ಲಿಗೆ ಬಂದರೆ ಮಾತನಾಡಬಹುದೆಂದೂ ಗಾಂಧೀಜಿ ತಿಳಿಸಿದರು.

ಗಾಂಧೀಜಿಯವರು ನಂದಿಬೆಟ್ಟಕ್ಕೆ ಬಂದನಂತರ ಆ ಸೂಫಿ ಅಲ್ಲಿ ಹೋದರು. ಆದರೆ ಅವರಿಗೆ ನಿರಾಶೆಯಾಯಿತು. 'ಏನು ಮಾಡುತ್ತಿದ್ದೀರಿ ಗಾಂಧೀಜಿ' ಎಂದು ಬೇಸರದಿಂದ ಕೇಳಿದರು. ಆಗ ಗಾಂಧೀಜಿಯವರು 'ಬನ್ನಿ; ಬಾಂಬ್ ತಯಾರಿಸುತ್ತಿದ್ದೇನೆ' ಎಂದು ಪ್ರಸನ್ನಚಿತ್ತರಾಗಿ ಹೇಳಿದರು. ಹೌದು; ಗಾಂಧೀಜಿಯವರು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ನಿರ್ನಾಮ ಮಾಡುವಂಥ 'ಬಾಂಬ್' ತಯಾರಿಸುತ್ತಿದ್ದರು.

ಆ ಸೂಫಿ ಸಂತ ಬಂದ ಸಂದರ್ಭದಲ್ಲಿ ಗಾಂಧೀಜಿಯವರು ಚರಕ ಹಿಡಿದು ನೂಲು ತೆಗೆಯುತ್ತಿದ್ದರು. ನೂಲು ಸುತ್ತಿ ಸುತ್ತಿ ಚರಕದ ಉರುಳೆ ಬಾಂಬಿನ ಹಾಗೆ ಕಾಣುತ್ತಿತ್ತು. ಬಡರಾಷ್ಟ್ರಗಳು ಸ್ವಾವಲಂಬನೆ ಸಾಧಿಸಲು ಸಹಾಯಕವಾಗುವ ವಸ್ತುಗಳೆಲ್ಲ ಸಾಮ್ರಾಜ್ಯಶಾಹಿ ಶಕ್ತಿಗಳಿಗೆ ಬಾಂಬ್‌ಗಳ ಹಾಗೆ ಕಾಣುತ್ತವೆ ಎಂಬುದು ಗಾಂಧೀಜಿಯವರು ಕಂಡುಕೊಂಡ ಸತ್ಯವಾಗಿತ್ತು. ಗಾಂಧೀಜಿಯವರು ಸ್ವದೇಶಿ ಆಂದೋಲನದಿಂದಾಗಿ ಇಂಗ್ಲೆಂಡಿನ ಮ್ಯಾಂಚೆಸ್ಟರ್, ಯಾರ್ಕ್‌ಷೈರ್ ಕಡೆಗಳಲ್ಲಿನ ಜವಳಿ ಗಿರಣಿಗಳು ಭಾರತದಲ್ಲಿ ಮಾರುಕಟ್ಟೆ ಕಳೆದುಕೊಂಡು ಬಂದಾದವು. ತಮ್ಮ ವಸ್ತುಗಳ ಮಾರಾಟಕ್ಕಾಗಿ ಹೆಚ್ಚು ಹೆಚ್ಚು ಮಾರುಕಟ್ಟೆಗಳು ಸಿಕ್ಕಂತೆಲ್ಲ ಸಾಮ್ರಾಜ್ಯಶಾಹಿ ಶಕ್ತಿ ಪ್ರಬಲವಾಗುತ್ತ ಹೋಗುತ್ತದೆ. ಮಾರುಕಟ್ಟೆಗಳನ್ನು ಕಳೆದುಕೊಂಡಂತೆಲ್ಲ ನಮ್ಮ ದೇಶ ದುರ್ಬಲವಾಗುತ್ತದೆ. ಸಾಮ್ರಾಜ್ಯಶಾಹಿ ವ್ಯವಸ್ಥೆ ಬೃಹತ್ ಪ್ರಮಾಣದಲ್ಲಿ ಉತ್ಪಾದಿಸುವ ಬೆಲೆಗಳು ಸಹಜವಾಗಿಯೇ ಸ್ಥಳೀಯರು ಉತ್ಪಾದಿಸುವ ವಸ್ತುಗಳ ಬೆಲೆಗಳಿಗಿಂತ ಕಡಿಮೆಯದಾಗಿರುತ್ತವೆ. ಇಂತಹ ವಸ್ತುಗಳು ಸಾಮ್ರಾಜ್ಯಶಾಹಿ ವ್ಯವಸ್ಥೆಯ ನಿಜವಾದ ಸೈನ್ಯ ಎಂದು ಕಾರ್ಲ್‌ಮಾರ್ಕ್ಸ್ ಅವರು ೧೮೫೮ರಲ್ಲೇ ಹೇಳಿದ್ದಾರೆ. ಈ ಸೈನ್ಯವನ್ನು ಸೋಲಿಸಬೇಕೆಂದರೆ, ಬಡರಾಷ್ಟ್ರಗಳು ಸ್ವಾವಲಂಬಿ ಆಗುವುದೊಂದೇ ದಾರಿ.

ಗಾಂಧೀಜಿಯವರು ಎರಡನೇ ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಲು ಇಂಗ್ಲೆಂಡಿಗೆ ಹೋದ ಸಂದರ್ಭದಲ್ಲಿ ಜವಳಿ ಗಿರಣಿಗಳ ಕಾರ್ಮಿಕರ ಸ್ಥಿತಿಗತಿ ತಿಳಿದುಕೊಳ್ಳುವುದಕ್ಕಾಗಿ ಮ್ಯಾಂಚೆಸ್ಟರ್‌ಗೆ ಭೇಟಿ ನೀಡಿದಾಗ, ಜವಳಿ ಗಿರಣಿಗಳು ಬಂದಾಗಿ, ಕಾರ್ಮಿಕರು ಕೆಲಸವಿಲ್ಲದೆ ಅರೆಹೊಟ್ಟೆ ಜೀವನ ಸಾಗಿಸುತ್ತಿದ್ದುದನ್ನು ಕಂಡು ಗಳಗಳನೆ ಅತ್ತರು. ಅಲ್ಲಿನ ಕಾರ್ಮಿಕ ಮಹಿಳೆಯರು ಅವರ ಕಣ್ಣೀರು ಒರೆಸಿ ಮಗುವಿನಂತೆ ಎತ್ತಿಕೊಂಡರು. ನಿಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ನಾವು ಉಪವಾಸ ಇರಲು ಸಿದ್ಧರಿದ್ದೇವೆ ಎಂದು ಹೇಳಿದರು!

### ಚೈತನ್ಯ ಸಂಜೆ

ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ೫೪ನೆಯ ಚೈತನ್ಯ ಸಂಜೆ ಕಾರ್ಯಕ್ರಮ ಚುಟುಕ ಸಾಹಿತ್ಯ ಪರಿಷತ್ತಿನ ಶ್ರೀ ಹೆಚ್.ಎಸ್. ರೇಣುಕ ಪ್ರಸಾದರ ಅಧ್ಯಕ್ಷತೆಯಲ್ಲಿ ನಡೆಯಿತು. ಜಿಲ್ಲಾ ಅಧ್ಯಕ್ಷರಾದ ಶ್ರೀ ದಿಬ್ಬೂರು ಸಿದ್ಧಲಿಂಗಪ್ಪನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಬಂದಿದ್ದ ಕೆಲವು ಸಾಹಿತಿಗಳು ತಮ್ಮ ಚುಟುಕಗಳನ್ನು ಓದಿದರು. ಶ್ರೀ ರಾಜನ್, ಶ್ರೀ ವಸಂತರಾಜು, ಶ್ರೀ ಜಿ.ಆರ್. ಗುರುಮೂರ್ತಿ, ಶ್ರೀಮತಿ ಕೊಪ್ಪರಂ ಅನ್ನಪೂರ್ಣ ಮುಂತಾದವರು ಇದ್ದರು.

ಶ್ರೀ ರೇಣುಕ ಪ್ರಸಾದ್ ಅವರು ಪ್ರತಿ ತಿಂಗಳ ಮೂರನೇ ಶುಕ್ರವಾರ ಚುಟುಕು ಸಾಹಿತ್ಯಕ್ಕೆ ಮೀಸಲಾಗಿಟ್ಟರೆ ಪ್ರತಿ ತಿಂಗಳೂ ತಾವು ಸಾಹಿತಿಗಳೊಡನೆ ಬರುವುದಾಗಿಯೂ ಜಿಲ್ಲಾ ಶರಣಸಾಹಿತ್ಯ ಪರಿಷತ್ತಿನ ಚೈತನ್ಯ ಸಂಜೆ ಬಹಳ ಜನರಿಗೆ ಚೈತನ್ಯದಾಯಕವಾಗಿದೆ ಎಂದೂ ಹೇಳಿದರು. ಶ್ರೀಮತಿ ಕೊಪ್ಪರಂ ಅನ್ನಪೂರ್ಣರವರು ಎಲ್ಲರನ್ನೂ ವಂದಿಸಿದರು.

ವರದಿ : ಎಸ್. ಮರುಳಪ್ಪ, ಬೆಂಗಳೂರು







# ಯಾರು ನಿಜವಾದ ಸಂನ್ಯಾಸಿ?

## ಅಕ್ಕನ ಒಂದು ಅರ್ಥಪೂರ್ಣ ವಚನ

ಬಿ.ಎನ್. ತೇಜಸ್ವಿನಿದೇವಿ ಅರಸ್
ನಂ. ೫೭೬, ಆನೇ ಮುಖ್ಯರಸ್ತೆ, ಎಂ.ಸಿ. ಲೇಔಟ್ ವಿಜಯನಗರ, ಬೆಂಗಳೂರು

ಸೂರ್ಯನ ಪ್ರಜ್ವಲ ಕಿರಣಗಳನ್ನು ಹಣತೆಯಲ್ಲಿನ ಮಿಣುಕು ಬೆಳಕೊಂದು ವರ್ಣಿಸಹೊರಟಂತೆ, ನಾನು ಶಿವಶರಣೆ ಮಹಾದೇವಿ ಅಕ್ಕನ ಒಂದು ವಚನವನ್ನು ಅರ್ಥೈಸಲು ಹೊರಟಿದ್ದೇನೆ. ಇಲ್ಲಿದೆ ಆ ವಚನ :

*ಅರ್ಥಸಂನ್ಯಾಸಿಯಾದಡೇನಯ್ಯ?*
*ಆವಂಗದಿಂದ ಬಂದಡೆಯೂ ಕೊಳ್ಳದಿರಬೇಕು.*
*ರುಚಿಸನ್ಯಾಸಿಯಾದಡೇನಯ್ಯ?*
*ಜಿಹ್ವೆಯ ಕೊನೆಯಲ್ಲಿ ಮಧುರವನರಿಯದಿರಬೇಕು.*
*ಸ್ತ್ರೀಸನ್ಯಾಸಿಯಾದಡೇನಯ್ಯ?*
*ಜಾಗ್ರತ್-ಸ್ವಪ್ನ-ಸುಷುಪ್ತಿಯಲ್ಲಿ ತಪ್ಪಿಲ್ಲದಿರಬೇಕು.*
*ದಿಗಂಬರಿಯಾದಡೇನಯ್ಯ?*
*ಮನ ಬತ್ತಲೆಯಿರಬೇಕು.*
*-ಇಂತೀ ಚತುರ್ವಿಧ ಹೊಲಬರಿಯದೆ*
*ವೃಥಾ ಕೆಟ್ಟರು ಕಾಣಾ ಚನ್ನಮಲ್ಲಿಕಾರ್ಜುನ.*
*(ಡಾ. ಎಲ್. ಬಸವರಾಜು, 'ಅಕ್ಕನ ವಚನಗಳು' ವಚನ ೨೩೭, ಗೀತಾ ಬುಕ್ ಹೌಸ್, ಮೈಸೂರು)*

ಈ ವಚನದಲ್ಲಿ 'ಸಂನ್ಯಾಸಿ' ಎನ್ನುವ ಪದ ಪ್ರಾಮುಖ್ಯತೆಯನ್ನು ಹೊಂದಿರುವುದರಿಂದ ಮೊದಲು 'ಸಂನ್ಯಾಸ' ಪದದ ಅರ್ಥವನ್ನು ಅರ್ಥೈಸಿಕೊಂಡಲ್ಲಿ ಈ ವಚನವನ್ನು ಸರಳವಾಗಿ ಅರ್ಥ ಮಾಡಿಕೊಳ್ಳಬಹುದು. ಆದ್ದರಿಂದ ಸಂನ್ಯಾಸ (ಕನ್ನಡದಲ್ಲಿ 'ಸನ್ಯಾಸ' ಎಂಬುದೂ ಬಳಕೆಯಲ್ಲಿ ಇದೆ) ಪದದ ಅರ್ಥವನ್ನು ತಿಳಿಯೋಣ.

ಸಂ-ಸಮ್ಯಕ್ ಚೆನ್ನಾಗಿ, ಎಲ್ಲವನ್ನೂ, ಸರ್ವಸ್ವವನ್ನು, ಸಂಪೂರ್ಣವಾಗಿ, ನಿಃಶ್ಶೇಷವಾಗಿ; ನ್ಯಾಸ-ತೊರೆಯುವುದು, ಎಂದರೆ ಸರ್ವಸ್ವವನ್ನೂ ತೊರೆದವನು 'ಸಂನ್ಯಾಸಿ'.

'ಸನ್ಯಾಸತ್ವದ' ನಿಜ ಅರ್ಥವರಿಯದೆ, ಸನ್ಯಾಸಿಯಾಗಲು ಹೊರಟ ಡಾಂಭಿಕರನ್ನು ಅಕ್ಕಮಹಾದೇವಿ ತನ್ನ ಈ ವಚನದಿಂದ ಎಚ್ಚರಿಸುತ್ತಾಳೆ. ಮತ್ತು ನಿಜವಾದ ಸನ್ಯಾಸತ್ವದ ಅರ್ಥವನ್ನು ತಿಳಿಸಿ ಹೇಳುತ್ತಾಳೆ. ಆಕೆ ಹೇಳುತ್ತಾಳೆ: 'ಅರ್ಥಸನ್ಯಾಸಿಯಾದರೇನಯ್ಯ?'

'ಅರ್ಥ'-ಹಣ; 'ಅರ್ಥ ಸನ್ಯಾಸಿ'-ಹಣದ ವ್ಯಾಮೋಹ ಬಿಟ್ಟವನು! ಹಣದ ವ್ಯಾಮೋಹ ತೊರೆಯುವುದು ಬಹಳ ಕಷ್ಟ. ಪ್ರತಿಯೊಂದು ಸೌಲಭ್ಯಕ್ಕೂ ಮೊದಲು ಹಣ ಬೇಕು. ಮನುಷ್ಯನ ಜೀವನದ ಒಂದು ಅಂಗ ಈ ಹಣ. ವಿದ್ಯಾರ್ಜನೆ, ಧನಾರ್ಜನೆ, ಜ್ಞಾನಾರ್ಜನೆ-ಇವು ಜೀವನದ ಮೂಲಭೂತ ಅಗತ್ಯಗಳು ಎಂದೂ ಹೇಳಬಹುದು. ಅದರಲ್ಲೂ ಇಂದಿನ ವಿದ್ಯಾರ್ಜನೆ ಕೇವಲ ಧನಾರ್ಜನೆಗಾಗಿಯೇ ಎನ್ನುವ ಹಂತ ತಲುಪಿರುವುದು ವಿಷಾದನೀಯವಾದ ಸಂಗತಿ! ಆದರೆ ಧನಾರ್ಜನೆ ಮಾಡಿದವರಲ್ಲಿ ಕೆಲವರಾದರೂ ತಾನು, ತನ್ನ ಹೆಂಡತಿ, ತನ್ನ ಮಕ್ಕಳು ಎನ್ನುವ ಸ್ವಾರ್ಥದಿಂದ ಹೊರಬಂದು ಸಮಾಜಸೇವೆ, ಶಿವಸೇವೆ ಮಾಡುತ್ತಿರುವುದು ಸ್ವಲ್ಪ ತೃಪ್ತಿ ಕೊಡುವಂಥ ವಿಚಾರ. ಸಂಸಾರದಲ್ಲೇ ಇದ್ದು, ಸೇವಾಮನೋಧರ್ಮವುಳ್ಳ ಇಂಥಾ ಉದಾತ್ತ ವ್ಯಕ್ತಿಗಳನ್ನು ಸಧ್ಯದ, ಇಂದಿನ ದಿನಗಳ ಸಮಾಜದ ಪರಿಸ್ಥಿತಿಯಲ್ಲಿ 'ಅರ್ಥಸನ್ಯಾಸಿ'ಗಳು ಎಂದು ಹೇಳಿದರೆ ತಪ್ಪಾಗಲಾರದೇನೋ ಎನ್ನುವುದು ನನ್ನ ಅಭಿಪ್ರಾಯ!

ಆದರೆ ಅಕ್ಕಮಹಾದೇವಿ "ಅರ್ಥಸನ್ಯಾಸಿ'ಯಾದವನು 'ಆವಂಗದಿಂದ ಬಂದಡೂ ಕೊಳ್ಳದಿರಬೇಕು!' ಎಂದಿದ್ದಾಳೆ. ಹಣ ಯಾವ ಮಾರ್ಗದಿಂದ ಬಂದರೂ ಯಾವ ರೂಪದಿಂದ ಬಂದರೂ, ಅದನ್ನು ಸ್ವೀಕರಿಸಬಾರದು. ಹೀಗೆ ಅಕ್ಕ 'ಅರ್ಥಸನ್ಯಾಸಿ' ಯಾರು ಎನ್ನುವುದನ್ನು ವಿಶ್ಲೇಷಿಸಿದ್ದಾಳೆ.

ಇನ್ನು 'ರುಚಿಸನ್ಯಾಸಿಯಾದಡೇನಯ್ಯ, ಜಿಹ್ವೆಯ ಕೊನೆಯಲ್ಲಿ ಮಧುರವನರಿಯದಿರಬೇಕು!' ಎಂದಿದ್ದಾಳೆ, ಅಕ್ಕ. 'ರುಚಿಸನ್ಯಾಸಿ' ಎಂದು ಹೇಳುತ್ತಾಳೆ. ನಾಲಗೆಯ ಚಾಪಲ್ಯವನ್ನು ಬಿಟ್ಟವನು ರುಚಿಸನ್ಯಾಸಿ!

ಈ ರುಚಿಗಳಲ್ಲಿ ಆರು ವಿಧ. ಅದನ್ನೇ ಷಡ್ರಸಗಳು ಅಂತ ಹೇಳುತ್ತೇವೆ. ಅವು- ಸಿಹಿ, ಹುಳಿ, ಉಪ್ಪು, ಖಾರ, ಒಗರು ಮತ್ತು ಕಹಿ ಅನ್ನುವುದು ಎಲ್ಲರಿಗೂ ಗೊತ್ತು. ನಮ್ಮ ಜಿಹ್ವೆ ಈ ರುಚಿಗಳ ಸ್ವಾದಕ್ಕಾಗಿ ಹಾತೊರೆಯುತ್ತೆ ಅನ್ನುವುದು ಒಂದು ಸತ್ಯ. ಈ ರುಚಿಗಳ ಸ್ವಾದನೆಗಾಗಿಯೇ, ಧನಾರ್ಜನೆಯೂ ನಡೆಯುತ್ತೆ ಅನ್ನುವುದು ಒಂದು

> ಜಿಪುಣನಾದವನು ದೇಶದ ಒಡೆಯನಾಗಿರಬಾರದು;
> ಧಾರಾಳಿಯಾದವನಿಗೆ ಬಡತನ ಬರಬಾರದು.
> -ಫಿರ್ದೂಸಿ



ಕಟು ಸತ್ಯ. ಏಕೆಂದರೆ, ಹಣವಿಲ್ಲದೆ ಈ ಜಿಹ್ವೆಯ ಚಾಪಲ್ಯವನ್ನು ತೀರಿಸಿಕೊಳ್ಳಲು ಆಗುವುದಿಲ್ಲ. ಅದಕ್ಕೇ ಇರಬೇಕು ಅಕ್ಕ ಮೊದಲು ಅರ್ಥಸನ್ಯಾಸಿಯ ಬಗ್ಗೆ ಮಾತಾಡಿದ್ದಾಳೆ. ಯಾವ ಮಾರ್ಗದಿಂದ ಬಂದಾಗ್ಯೂ ಹಣವನ್ನು ಸ್ವೀಕರಿಸದವನು 'ಅರ್ಥಸನ್ಯಾಸಿ' ಎನ್ನುತ್ತಾಳೆ. ಆಕೆ ಬಹಳ ಜಾಣೆ ಅನ್ನುವುದಕ್ಕೆ ಈ ವಚನ ಸಾಕ್ಷಿಯಾಗಿದೆ. ಯಾಕಂದರೆ, ಮೊದಲು ಅರ್ಥಸನ್ಯಾಸಿಯ ಬಗ್ಗೆ ಮಾತನಾಡಿ, ಆಮೇಲೆ ರುಚಿಸನ್ಯಾಸಿಯ ಬಗ್ಗೆ ಮಾತನಾಡುತ್ತಾಳೆ. ಧನಾರ್ಜನೆಯೇ ಇಲ್ಲದಾಗ, ಜಿಹ್ವಾಚಾಪಲ್ಯದತ್ತ ಮನಸ್ಸು ವಾಲುವುದಿಲ್ಲ ಎನ್ನುವುದು-ಅವಳ ವಾದವಿದ್ದಂತಿದೆ!

ಜಿಹ್ವೆಯ ಚಾಪಲ್ಯವನ್ನು ತೊರೆಯುವುದು ಸುಲಭದ ಮಾತೇನಲ್ಲ! ನಾವು ಎಲ್ಲಾದರೂ ರುಚಿಯಾದ ಆಹಾರ ಸೇವಿಸಿದರೆ, ಎಷ್ಟೋ ದಿನಗಳ ನಂತರ, ಎಷ್ಟೋ ತಿಂಗಳುಗಳ ನಂತರ, ಅಷ್ಟೇ ಏಕೆ, ವರ್ಷಗಳ ನಂತರವೂ ನಾಲಿಗೆಗೆ ಆ ರುಚಿಯ ನೆನಪು ಇರುತ್ತದೆ. ಆಸ್ವಾದವನ್ನು ನೆನೆಸಿಕೊಂಡಾಗ ನಾಲಗೆಯ ತುದಿಯಲ್ಲಿ ನೀರೂರುವುದೂ ಉಂಟು. ಇಂಥಾ ನಾಲಗೆಯ ಚಾಪಲ್ಯವನ್ನು ಬಿಡುವುದೇ ಕಷ್ಟ.

ಅಂತಹುದರಲ್ಲಿ ಅಕ್ಕ ಹೇಳುತ್ತಾಳೆ, ನಾಲಗೆ ಚಾಪಲ್ಯ ಬಿಟ್ಟರೆ ಸಾಲದು! ಅವಳ ದೃಷ್ಟಿಯಲ್ಲಿ 'ರುಚಿಸನ್ಯಾಸಿ'ಯಾದವನು ಅಂದಂದು ತನ್ನ ಪಾಲಿಗೆ ಬಂದ ಆಹಾರವನ್ನು 'ಶಿವಾರ್ಪಣಮಸ್ತು' ಎಂದು ಸೇವಿಸಿ, ಆ ಕ್ಷಣವೇ ಅದನ್ನು ಮರೆತುಬಿಡಬೇಕೇ ವಿನಃ ತಾನು ತಿಂದುದರ ರುಚಿ ಮಾಧುರ್ಯವನ್ನು ತನ್ನ ನಾಲಗೆಯ ತುದಿಯಲ್ಲಿ ಉಳಿಸಿಕೊಳ್ಳಬಾರದು. ಆ ರುಚಿಯನ್ನು ನೆನೆದು ನಾಲಿಗೆ ಚಪ್ಪರಿಸಬಾರದು. ಆಗ ಮಾತ್ರ ಅವನು 'ರುಚಿಸನ್ಯಾಸಿ'ಯಾದಾನು ಎಂದು ತರ್ಕಿಸುತ್ತಾಳೆ. ಹೀಗೆ ಸನ್ಯಾಸತ್ವದ ನಿಷ್ಠೆಯನ್ನು ಎತ್ತಿ ಹಿಡಿಯುತ್ತಾಳೆ. ಈ ನಿಷ್ಠೆಯನ್ನು ಪುಷ್ಟೀಕರಿಸುವ ನನ್ನದೇ ಒಂದು ವಚನ:

*ಸರಿದಿಲ್ಲ ನಿನಗಿನ್ನೂ ಭವಬಂಧನದ ಬಯಕೆ*
*ಹರಿದಿಲ್ಲ ಜಡಜಾದಿಯ ಒಳ ಹೊದಿಕೆ!*
*ಸ್ವಪ್ನದೊಳೇಕೆ ಕನವರಿಕೆ ಕಾಮತುರಿಕೆ?*
*ನಿನ್ನೊಳೇ ನಿನಗಿಲ್ಲ ಮನವರಿಕೆ*
*ನೀ ಏನು ಕೊಟ್ಟೀಯೆ ಶುದ್ಧವನು ಲೋಕಕ್ಕೆ?*
*ಸನ್ಯಾಸಿ ಆಗುವೊಡೆ ಆಗಿಬಿಡು ಶುದ್ಧಾಗಿ*
*ಆಗದಿದ್ದರೆ ಬೇಡ ಇದ್ದುಬಿಡು ಪೆದ್ದಾಗಿ ತೇಜನಿನದ!*

ಇನ್ನು "ಸ್ತ್ರೀ-ಸನ್ಯಾಸಿಯಾದಡೇನಯ್ಯ, ಜಾಗ್ರಸ್ವಪ್ನಸುಷುಪ್ತಿಯಲ್ಲಿ ತಪ್ಪಿಲ್ಲದಿರಬೇಕು" ಎಂದಿದ್ದಾಳೆ. ನೋಡಿ, ಆಕೆ ಸನ್ಯಾಸತ್ವವನ್ನು ವಿಭಜನೆ ಮಾಡಿ, ಪ್ರತಿಯೊಂದು ಸನ್ಯಾಸದಲ್ಲೂ ಏನೇನು ನಿಷ್ಠೆಗಳನ್ನು ಅನುಸರಿಸಬೇಕು ಎಂದು ಹೇಳುವ ರೀತಿ ವಿಸ್ಮಯಕಾರಿ ಹಾಗೂ ಲೋಕೋಪಕಾರಿಯಾಗಿದೆ. ಸನ್ಯಾಸಿಗಳು ಅರಿತಿರಬೇಕಾದ ಸೂಕ್ಷ್ಮಗಳನ್ನು ಆಕೆ ಬಹಳ ಸೂಕ್ತವಾಗಿ ವಿವರಿಸಿದ್ದಾಳೆ. ಇದು, ದಿಗಂಬರಿಯಾಗಿದ್ದ ಅವಳ ಜಾಗೃತ ಪ್ರಜ್ಞೆಯನ್ನು ಪ್ರತಿಪಾದಿಸುತ್ತೆ. ಅಲ್ಲದೇ ಆಕೆಯದು ಎರಡಿಲ್ಲದ ಭಕ್ತಿ ಮತ್ತು ನಿಷ್ಠೆ ಅನ್ನುವುದನ್ನು ಪ್ರತಿಪಾದಿಸುತ್ತೆ. "ಸ್ತ್ರೀಸನ್ಯಾಸಿ" ಎಂದು ಹೇಳುತ್ತಾಳೆ. ಅಂದರೆ ಸನ್ಯಾಸಿ ಆಗಲೇಬೇಕೆಂದು ಹೊರಟವನಿಗೆ ಅಕ್ಕ ಎಚ್ಚರಿಸಿದ ಹಾಗೆ. ಒಂದು ಪಕ್ಷ 'ಅರ್ಥಸನ್ಯಾಸಿ', 'ರುಚಿಸನ್ಯಾಸಿ' ಆದರೂ ಆಗಿಬಿಡಬಹುದು. ಆದರೆ ಈ 'ಸ್ತ್ರೀಸನ್ಯಾಸಿ' ಆಗುವುದಿದೆಯಲ್ಲಾ ಇದು ಬಹಳ ಕಷ್ಟದ ವಿಚಾರ ಅನ್ನುವುದು ಪುರಾಣ ಪುಣ್ಯಕಥೆಗಳಲ್ಲೂ ಗೋಚರವಾಗಿದೆ. ಇದಕ್ಕೆ ಒಂದು ಪ್ರಮುಖ ಸಾಕ್ಷಿ ಮಹರ್ಷಿ ವಿಶ್ವಾಮಿತ್ರ! ಎಷ್ಟೋ ಋಷಿ ಮುನಿಗಳೂ, ದೇವಾದಿ ದೇವತೆಗಳೂ ಹೆಣ್ಣಿನ ಸೌಂದರ್ಯಕ್ಕೆ ಸೋತಿರುವ ನಿದರ್ಶನಗಳಿವೆ. ಅಷ್ಟೇ ಏಕೆ? ರಾಮಾಯಣ, ಮಹಾಭಾರತ ಯುದ್ಧಗಳೂ ಹೆಣ್ಣಿನ ಹಿನ್ನೆಲೆಯಲ್ಲೇ ನಡೆದಿವೆ. ಇಂಥ ಹೆಣ್ಣಿನ ವ್ಯಾಮೋಹ (ಚಾಪಲ್ಯ)ದಿಂದ ದೂರ ಉಳಿಯುವುದು ಸನ್ಯಾಸಿಗೂ ಕಷ್ಟವೇ.

ಸ್ತ್ರೀಸನ್ಯಾಸಿಯಾದವನು, ಹೆಣ್ಣನ್ನು ಕಣ್ಣೆತ್ತಿ ನೋಡದೆ, ಹೆಣ್ಣಿನ ವ್ಯಾಮೋಹದಿಂದ ದೂರವಿದ್ದರೂ ಅವನು 'ಸ್ತ್ರೀಸನ್ಯಾಸಿ' ಅನ್ನೋದಕ್ಕೆ ಅಕ್ಕನ ಒಪ್ಪಿಗೆ ಇಲ್ಲ! ಕಾರಣ "ಸ್ತ್ರೀಸನ್ಯಾಸಿಯಾದಡೇನಯ್ಯ, ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ತಟ್ಟೆ(ಪ್ಪಿ)ಲ್ಲದಿರಬೇಕು" ಎಂಬುದು ಅವಳ ವಾದ! ಅಂದರೆ, ಎಚ್ಚರದಲ್ಲಾಗಲಿ, ಕನಸಿನಲ್ಲಾಗಲಿ, ನಿದ್ರಾವಸ್ಥೆಯಲ್ಲಾಗಲಿ, ಸ್ತ್ರೀಯನ್ನು ಬಯಸಿದಾಗ್ಯೂ ಅದು ಮೈಲಿಗೆಯೆ! ಆ ಮೈಲಿಗೆ ತಟ್ಟದಂತೆ, ಮನವನ್ನು ಶುದ್ಧವಾಗಿಟ್ಟುಕೊಂಡವನು ಮಾತ್ರ 'ಸನ್ಯಾಸಿ' ಯಾಗಲು ಯೋಗ್ಯ ಎಂಬುದು ಅವಳ ವಾದ! ಅದು ಸತ್ಯ ಕೂಡ! ಸ್ತ್ರೀ ಚಾಪಲ್ಯದಿಂದ ಮೈಲಿಗೆಯಾದ ಮನ ಹೊತ್ತವನು ಹೇಗೆ ತಾನೆ ಸನ್ಯಾಸಿಯಾದಾನು? 'ಸನ್ಯಾಸಿ' ಅನ್ನುವ ಪದಕ್ಕೆ ಅವನೊಂದು ಅಪವಾದ ಅಷ್ಟೇ! ಈ ಸತ್ಯವನ್ನು ಪ್ರತಿಪಾದಿಸುವ ನನ್ನ ಒಂದು ಚೌಪದಿ ಹೀಗಿದೆ:

*ಅಂಗಸಂಗ ತುಮುಲವಳಿಯದ*
*ಜಂಗಮರ ಹೇಗೆ ನಂಬಲಯ್ಯಾ?*
*ಸಂಗಮೇಶ್ವರನ ಶರಣರರುಹಿದ*
*ನಿಜ ಜಂಗಮರಿದ್ದೊಡೆನಗರುಹಿರಯ್ಯಾ ತೇಜನಿನದ!*

ಜಂಗಮನಿಗೆ ಶಿವಲಿಂಗ ತುಮುಲವಿರಬೇಕೆ ವಿನಃ ಅಂಗಸಂಗ ತುಮುಲವಿರಬಾರದು ಎನ್ನುತ್ತಾ, ಜಂಗಮ ಸನ್ಯಾಸಿಗಳಲ್ಲಿ

> ಸುಲಭವಾಗಿ ತಳ್ಳಿಹಾಕಲಾಗದಂಥ ತೀರ್ಪನ್ನು
> ಕೊಡುವವರು ಇವರಿಬ್ಬರೇ: ಲೋಕ ಮತ್ತು ಕಾಲ.
>
> -ಜಿ.ಎಸ್. ಶಿವರುದ್ರಪ್ಪ







ತನುಮನಗಳ ಮಡಿವಂತಿಕೆಯಿರಬೇಕು ಎಂಬುದನ್ನ ಪ್ರತಿಪಾದಿಸುತ್ತಾ, ಹೊಟ್ಟೆಪಾಡಿಗಾಗಿಯೋ, ಐಶಾರಾಮಿ ಜೀವನಕ್ಕಾಗಿಯೋ ಸನ್ಯಾಸಿಯ ವೇಶ ಧರಿಸಿ ಜನರನ್ನು ವಂಚಿಸುತ್ತಿರುವವರ ನಡುವೆ, ನಿಜ ಜಂಗಮವರನ್ನು ತೋರಿರೆಂದು ಶಿವಶರಣರನ್ನು ಬೇಡಿದ್ದೇನೆ.

*ಇನ್ನು ಅಕ್ಕನ ವಚನದ ಕೊನೆಯ ಭಾಗ-*
*"ದಿಗಂಬರಿಯಾದಡೇನಯ್ಯಾ? ಮನಬತ್ತಲೆ ಇರಬೇಕು"*

ಇಲ್ಲಿ, ಅಕ್ಕ ತನ್ನ ಆತ್ಮವಿಮರ್ಶೆಯನ್ನೂ ಮರೆಯದೇ ಮಾಡಿಕೊಂಡಿದ್ದಾಳೆ. ತನ್ನ ದಿಗಂಬರತ್ವದ ಬಗ್ಗೆಯೂ ಮರೆಯದೇ ಹೇಳಿಕೊಂಡಿದ್ದಾಳೆ. 'ದಿಗಂಬರಿಯಾದಡೇನಯ್ಯಾ' ಎಂಬಲ್ಲಿ ದಿಗಂಬರಿಯಾದರೆ ಸಾಲದು, 'ಮನ ಬತ್ತಲೆ ಇರಬೇಕು' ಎಂದಿದ್ದಾಳೆ ಮನಸ್ಸು ಆಸೆಗಳ ಹುತ್ತವಾದಾಗ ಅಲ್ಲಿ ಕತ್ತಲೆ ಇರುತ್ತೆ; ಬೆತ್ತಲೆಯಾದಾಗ ಅದು ಶುದ್ಧವಾಗಿರುತ್ತೆ. ಎಂದರೆ ಕೇವಲ ದೇಹ ದಿಗಂಬರವಾದರೆ ಸಾಲದು, ಮನವೂ ದಿಗಂಬರವಾಗಿರಬೇಕು. ಅಂದರೆ ಕಲ್ಮಶರಹಿತವಾಗಿರಬೇಕು, ಆತ್ಮಶುದ್ಧಿ ಇರಬೇಕು-ಎನ್ನುತ್ತಾಳೆ. ಮನ ಬತ್ತಲೆಯಾದಾಗಲೇ ಅಲ್ಲಿ ಶಿವ ನೆಲೆಯಾಗ್ತಾನೆ ಎನ್ನುವ ನಿಲುವು ಅವಳದು.

ಹೀಗೆ ಸ್ವವಿಮರ್ಶೆ ಮಾಡಿಕೊಳ್ಳುವ ಶ್ರೇಷ್ಠ ಗುಣ ಅಕ್ಕನಲ್ಲಿ ಇದ್ದುದರಿಂದಲೇ ಆಕೆ, ಸನ್ಯಾಸದ ಅತಿಸೂಕ್ಷ್ಮಗಳ ಒಳಹೊಕ್ಕು ವಿಹರಿಸಿದ್ದಾಳೆ ಮತ್ತು ಅದನ್ನು ವಿವರಿಸಿದ್ದಾಳೆ ಎನ್ನುವುದರಲ್ಲಿ ಎರಡು ಮಾತಿಲ್ಲ!

ಕೊನೆಯಲ್ಲಿ, 'ಇಂತೀ ಚತುರ್ವಿಧದ ಹೊಲಬರಿಯದೇ ವೃಥಾ ಕೆಟ್ಟರು ಕಾಣಾ, ಚೆನ್ನಮಲ್ಲಿಕಾರ್ಜುನ' ಎಂದಿದ್ದಾಳೆ. 'ಇಂತೀ...ಈ ವಿಧವಾದ, 'ಚತುರ್ವಿಧದ' ನಾಲ್ಕು ಮಾರ್ಗಗಳ, 'ಹೊಲಬರಿಯದೇ' ಅರ್ಥ ತಿಳಿಯದೇ ಅಂದರೆ, ಸನ್ಯಾಸದ ನಾಲ್ಕು ಮಾರ್ಗಗಳಾದ ಅರ್ಥಸನ್ಯಾಸ, ರುಚಿಸನ್ಯಾಸ, ಸ್ತ್ರೀಸನ್ಯಾಸ ಮತ್ತು ದಿಗಂಬರತ್ವದ ಸರಿಯಾದ ಅರ್ಥ ತಿಳಿಯದೇ ಸನ್ಯಾಸ ಸ್ವೀಕರಿಸಿದವರು, 'ವೃಥಾ ಕೆಟ್ಟರು ಕಾಣಾ' ಎನ್ನುತ್ತಾ, ಅನ್ಯಾಯವಾಗಿ ಇಂಥವರು ಕೆಟ್ಟುಹೋದರು ನೋಡಾ, ಚೆನ್ನಮಲ್ಲಿಕಾರ್ಜುನ!-ಎಂದು ತನ್ನ ಇಷ್ಟದೈವಕ್ಕೆ ನಿವೇದನೆ ಮಾಡಿಕೊಂಡಿದ್ದಾಳೆ.

ಇದು ಚಿತ್ತಸಮಾಧಾನವುಳ್ಳ ಶಿವಶರಣೆ ಅಕ್ಕಮಹಾದೇವಿಯ ವಚನದ ತಾತ್ಪರ್ಯ.

## ಅವರು ನಮ್ಮ ದೇಶದ ಬಗೆಗೆ...

**ಆಲ್ಬರ್ಟ್ ಐನ್‌ಸ್ಟೀನ್** : ನಾವು ಭಾರತೀಯರಿಗೆ ತುಂಬ ಕೃತಜ್ಞರಾಗಿರಬೇಕು. ಅವರು ನಮಗೆ ಎಣಿಕೆಯ ವಿಧಾನ ಕಲಿಸಿಕೊಟ್ಟರು. ಅದಿಲ್ಲದಿದ್ದರೆ ಯಾವುದೇ ಉಪಯುಕ್ತ ವೈಜ್ಞಾನಿಕ ಸಂಶೋಧನೆ ಸಾಧ್ಯವಾಗುತ್ತಿರಲಿಲ್ಲ.

**ಮಾರ್ಕ್ ಟ್ವೈನ್** : ಭಾರತವು ಮಾನವ ಜನಾಂಗದ ತೊಟ್ಟಿಲು, ಮಾನವ ನುಡಿಯ ಜನ್ಮಸ್ಥಳ, ಚರಿತ್ರೆಯ ತಾಯಿ, ಪುರಾಣಗಳ ಅಜ್ಜಿ, ಪರಂಪರೆಯ ಮುತ್ತಜ್ಜಿ. ಮಾನವ ಚರಿತ್ರೆಯಲ್ಲಿ ಕಂಡುಬರುವ ಅತ್ಯಂತ ಮೌಲಿಕ ಮತ್ತು ವಿನಾಶಕ ವಸ್ತುಗಳಿಗೆ ಭಾರತವೇ ಭಂಡಾರವಾಗಿದೆ.

**ರೊಮೈನ್ ರೋಲ್ಯಾಂಡ್** : ಮಾನವ ತನ್ನ ಅಸ್ತಿತ್ವದ ಬಗೆಗೆ ಕನಸು ಕಾಣಲು ಆರಂಭಿಸಿದ ಅತ್ಯಂತ ಪ್ರಾಚೀನ ಕಾಲದಿಂದ ಈ ಭೂಮಿಯ ಮೇಲೆ ಇರುವ ಜೀವಂತ ವ್ಯಕ್ತಿಗಳ ಎಲ್ಲ ಕನಸುಗಳ ಕೇಂದ್ರವೆಂದರೆ ಭಾರತ ಮಾತ್ರ.

**ಹೂಷಿಹ್** : ಭಾರತವು ಒಬ್ಬ ಸಿಪಾಯಿಯನ್ನು ಗಡಿ ದಾಟಿ ಕಳುಹಿಸದೆಯೇ ಚೈನಾವನ್ನು ೨೦ ಶತಮಾನಗಳಿಂದ ಸಾಂಸ್ಕೃತಿಕವಾಗಿ ಗೆದ್ದುಕೊಂಡಿದೆ.

-ಸಂಗ್ರಹ

## ವಸ್ತ್ರಗಳು

ಒಂದು ದಿನ ಸೌಂದರ್ಯ ಮತ್ತು ಕುರೂಪ ಒಂದು ಸಮುದ್ರ ದಂಡೆಯಲ್ಲಿ ಭೇಟಿಯಾದರು. ಇಬ್ಬರೂ ಸಮುದ್ರದಲ್ಲಿ ಸ್ನಾನ ಮಾಡೋಣ ಎಂದು ಪರಸ್ಪರ ಮಾತನಾಡಿಕೊಂಡರು.

ಅಂತೇ ಇಬ್ಬರೂ ಬಟ್ಟೆ ಕಳಚಿ ಸಮುದ್ರದ ನೀರಿನಲ್ಲಿ ಈಜಾಡಿದರು. ಸ್ವಲ್ಪ ಹೊತ್ತಾದ ನಂತರ ಕುರೂಪ ಹಿಂತಿರುಗಿ ದಂಡೆಗೆ ಬಂದು ಸೌಂದರ್ಯಳ ವಸ್ತ್ರಗಳನ್ನು ಧರಿಸಿ ತನ್ನಷ್ಟಕ್ಕೆ ತಾನು ಹೋದ.

ಹಾಗೆಯೇ ಸೌಂದರ್ಯಳೂ ಸಮುದ್ರದಿಂದ ಹೊರಗೆ ಬಂದು ನೋಡಿದಾಗ ತನ್ನ ವಸ್ತ್ರಗಳಿರಲಿಲ್ಲ. ಬೆತ್ತಲೆಯಾಗಿರುವುದಕ್ಕೆ ತುಂಬ ನಾಚಿಕೆ ಎನಿಸಿತು. ಅನ್ಯ ಮಾರ್ಗವಿಲ್ಲದೆ ಕುರೂಪದ ವಸ್ತ್ರಗಳನ್ನೇ ಧರಿಸಿ ತನ್ನ ದಾರಿ ಹಿಡಿದು ನಡೆದಳು.

ಇಂದಿಗೂ ಸ್ತ್ರೀ-ಪುರುಷರು ಒಬ್ಬರನ್ನು ಒಬ್ಬರು ತಪ್ಪಾಗಿ ತಿಳಿದುಕೊಂಡೇ ಇದ್ದಾರೆ. ಆದರೂ ಸೌಂದರ್ಯಳ ಮುಖವನ್ನು ನೋಡಿ ಆಕೆಯ ವಸ್ತ್ರಗಳ ಬಗೆಗೆ ತಲೆ ಕೆಡಿಸಿಕೊಳ್ಳದವರೂ ಇದ್ದಾರೆ. ಹಾಗೆಯೇ ಕುರೂಪಿಯ ಮುಖ ನೋಡಿ ಅವನ ವಸ್ತ್ರದ ಗುಟ್ಟು ಅರಿಯದವರೂ ಇದ್ದಾರೆ.

-ಖಲೀಲ್ ಗಿಬ್ರಾನ್



## ಆಧುನಿಕ ವಚನಗಳು

ಅಸಮಾನತೆ ಅಜ್ಞಾನವೇ ದುಃಖಕ್ಕೆ ಕಾರಣವಯ್ಯ
ಸಂಕುಚಿತತೆ ಅನೀತಿಯೇ ಗಲಭೆಗೆ ಕಾರಣವಯ್ಯ
ಚಂಚಲತೆ ಕೋಪವೇ ಕೆಡುಕಿಗೆ ಕಾರಣವಯ್ಯ
ಅಸಹಿಷ್ಣುತೆ ಅವಹೇಳನವೇ ಹಿಂಸೆಗೆ ಕಾರಣವಯ್ಯ
ಅನೈತಿಕತೆ ಅಮೌಲ್ಯವೇ ದುರ್ಗತಿಗೆ ಕಾರಣವಯ್ಯ
ಸೌಜನ್ಯತೆ ಸಮಾಧಾನವೇ ಗೆಲುವಿಗೆ ಕಾರಣವಯ್ಯ
ಮಾನವೀಯತೆ ಸಹಕಾರವೇ ಭಾವೈಕ್ಯತೆಗೆ ಕಾರಣವಯ್ಯ
ರಾಜೇಂದ್ರಪ್ರಿಯ ಪ್ರಭುವೇ ನಿಮ್ಮ ಸದಾ ಸ್ಮರಣೆಯೊಂದೇ
ಎನಗೆ ಮುಕ್ತಿಗೆ ಕಾರಣವಯ್ಯ.

ಶರಣನಾದವನು ತ್ರಿವಿಧ ದಾಸೋಹಿಯಾಗಿರಬೇಕು
ಶರಣನಾದವನು ಪಂಚಾಚಾರಿಯಾಗಿರಬೇಕು
ಶರಣನಾದವನು ಅರಿಷಡ್ವರ್ಗಗಳ ಗೆದ್ದಿರಬೇಕು
ಶರಣನಾದವನು ಷಟಸ್ಥಲಗಳನನುಸರಿಸಬೇಕು
ಶರಣನಾದವನು ಸಪ್ತವ್ಯಸನ ಮುಕ್ತನಾಗಿರಬೇಕು
ಶರಣನಾದವನು ಅಷ್ಟಾವರಣ ತಿಳಿದಿರಬೇಕು
ಶರಣನಾದವನು ನವವಿಧ ಭಕ್ತಿಯಿಂದೊಡಗೂಡಿರಬೇಕು
ಶರಣನಾದವನು ದಶಧರ್ಮಗಳ ಪಾಲಿಸಬೇಕು
ಶರಣನಾದವನು ಷೋಡಶೋಪಚಾರಿಯಾಗಿರಬೇಕು
ಇವೆಲ್ಲವೂ ಇದ್ದು ಸಕಲ ಜೀವಾತ್ಮರಿಗೆ ಲೇಸ ಬಯಸದಿದ್ದೊಡೆ
ಅವನು ಶರಣಪದವಿಗೆ ಅರ್ಹನಲ್ಲ ಕಾಣಾ
ರಾಜೇಂದ್ರಪ್ರಿಯ ಪ್ರಭುವೇ!

ಆಡುವ ಮಾತಿನಲ್ಲಿ ಸತ್ಯವಿರದಿದ್ದೊಡೆ
ಮಾಡುವ ಕಾಯಕದಲ್ಲಿ ನಿಷ್ಠೆಯಿರದಿದ್ದೊಡೆ
ಅರಳುವ ಹೂವಿನಲ್ಲಿ ಪರಿಮಳ ಇರದಿದ್ದೊಡೆ
ಬರೆಯುವ ಬರಹದಲ್ಲಿ ಸತ್ವ ಇರದಿದ್ದೊಡೆ
ಓದುವ ಓದಿನಲ್ಲಿ ಚಿತ್ತವಿರದಿದ್ದೊಡೆ
ಗುಡ್ಡಕ್ಕೆ ಕಲ್ಲು ಹೊತ್ತಂತೆ ನೋಡಾ
ರಾಜೇಂದ್ರಪ್ರಿಯ ಪ್ರಭುವೇ !

-ಡಾ. ರಾಜೇಂದ್ರ ಎಸ್. ಗಡಾದ

*ಸತ್ಯಶೋಧಕ್ಕೆ ಇಬ್ಬರು ಬೇಕಾಗುತ್ತದೆ : ಒಬ್ಬ ಹೇಳಲಿಕ್ಕೆ; ಇನ್ನೊಬ್ಬ ಅದನ್ನು ಅರ್ಥಮಾಡಿಕೊಳ್ಳಲಿಕ್ಕೆ !*

## ಸಿ.ಪಿ.ಕೆ. ವಚನಗಳು

ಮನುಷ್ಯ ಮನಸ್ಸು ಮಾಡಿದರೆ ಸುಲಭವಾಗಿ ದೇವನಾಗಬಹುದಯ್ಯಾ;
ಪಶುವಾಗುವುದು, ಪಿಶಾಚವಾಗುವುದು ಅಷ್ಟು ಸುಲಭವಲ್ಲವಯ್ಯ
ರಾಕ್ಷಸನಾಗುವುದು ಅಷ್ಟು ಸುಲಭವಲ್ಲವಯ್ಯಾ
ಆದರೂ ಬಹಳ ಮಂದಿ ಸುಲಭ ಮಾರ್ಗವನ್ನು ತೊರೆದು
ಕಷ್ಟಮಾರ್ಗವನ್ನೇಕೆ ಆರಿಸಿಕೊಳ್ಳುತ್ತಾರೆ, ಕಾರಣಿಕ ಪ್ರಭುವೆ?

* * *

ಅನೇಕರು ಅನ್ಯನಿಂದೆಯಲ್ಲಿ ತೊಡಗಿದ್ದರೆ
ನಾನು ಸದಾ ಆತ್ಮನಿಂದೆಯಲ್ಲಿ ತೊಡಗಿರುವೆನಯ್ಯಾ
ಅನೇಕರು ಅನ್ಯಪೀಡನೆಯಲ್ಲಿ ತೊಡಗಿದ್ದರೆ
ನಾನು ಸದಾ ಆತ್ಮಪೀಡನೆಯಲ್ಲಿ ತೊಡಗಿರುವೆನಯ್ಯಾ
ಈ ನಿಂದೆ, ಪೀಡೆ, ಹಿಂಸೆಗಳನ್ನು ಮಾಣಿಸಿ
ಆತ್ಮವನ್ನು ಕಾಪಾಡು ಕಾರಣಿಕ ಪ್ರಭುವೆ.

* * *

ಹನಿಗವನ ಮಹಾಕಾವ್ಯವೆಂದು ಯಾರು ಹೇಳಬಲ್ಲರಯ್ಯಾ?
ಹಾಗೆ ಹೇಳುವವರು ಶತಮೂರ್ಖರೊ ಹತಮೂರ್ಖರೊ ಆದಾರು
ಆದರೆ ಹನಿಗವನ ರಚನೆಯನ್ನು ಬಿಟ್ಟಾಕ್ಷಣ
ಮಹಾಕಾವ್ಯ ಸೃಷ್ಟಿಯಾಗದು
ಮಹಾಕಾವ್ಯ ರೂಪಗೊಳ್ಳತೊಡಗಿದರೆ
ಹನಿಗವನ ತನಗೆ ತಾನಾಗಿ ನಿಲ್ಲುತ್ತದೆ
ಇಷ್ಟಕ್ಕೂ ಮಹಾಕಾವ್ಯ ನಿನ್ನ ನವರತ್ನ ಖಚಿತ ಕಿರೀಟವಾದರೆ,
ಹನಿಗವನ ಬೆರಳಿನ ಹರಳಿನುಂಗುರವಲ್ಲವೆ ಕಾರಣಿಕ ಪ್ರಭುವೆ?

* * *

ಪುರಾಣ ಎಂಬುದು ವರ್ತಮಾನವೂ ಹೌದಲ್ಲವೆ, ಹೇಳಾ?
ಪ್ರಾಣಿಮೇಧವನ್ನೆಸಗಿ, ಇಂದ್ರ ಸಿಂಹಾಸನವನ್ನೇರಿ
ಶಶಿಯ ಮೇಲೆ ಕಣ್ಣು ಹಾಕಿ, ಋಷಿಯನ್ನೊದೆವ ನಹುಷರು
ಶಾಪ ಹತರಾಗುವುದು ತಪ್ಪುವುದೆ ಹೇಳಾ?
ಅಹಂಕಾರಕ್ಕೆ ಅಜಗರಸ್ಥಿತಿ ತಪ್ಪುವುದೆ, ಹೇಳಾ?
ಅಹಂಕಾರಕ್ಕೆ ಅಜ್ಞಾತವಾಸ ತಪ್ಪುವುದೆ, ಹೇಳಾ?
ಯಾರೂ ನಹುಷರಾಗಬಾರದು,
ಮಹಿಷರೂ ಆಗಬಾರದು ಕಾರಣಿಕ ಪ್ರಭುವೇ.

* * *

ಮನುಷ್ಯ ದೈಹಿಕವಾಗಿ, ಮಾನಸಿಕವಾಗಿ, ಆತ್ಮಿಕವಾಗಿ
ಸ್ವಸ್ಥನಾಗಿದ್ದರೆ ಸಾಕು, ಪರಿಪೂರ್ಣನಾಗಿದ್ದರೆ ಸಾಕು
ಅದಕ್ಕಿಂತ ದೊಡ್ಡ ಸಾಧನೆ ಬೇರೊಂದಿಲ್ಲವಯ್ಯಾ.
ಉಳಿದ ಸಾಧನೆಯನ್ನು ಅವನು ಮಾಡಬಹುದು, ಬಿಡಬಹುದು
ಕಾರಣಿಕ ಪ್ರಭುವೆ!

-ಸಿಪಿಕೆ







## ಕಾಯಕ ತತ್ವ

-ವೀರೇಂದ್ರ ಸಿಂಪಿ, ಬೀದರ

ವಿಶ್ವದಲ್ಲೇ ಶರಣರು ನಿರ್ದೇಶಿಸಿದ ಕಾರ್ಯಕತತ್ವ ಅಪೂರ್ವವಾಗಿದೆ. ಪಾಶ್ಚಾತ್ಯರಲ್ಲಿ Work is Worship ಎನ್ನುವ ಮಾತು ಪ್ರಚಲಿತವಾಗಿದೆ. ಆದರೆ ಶರಣರಲ್ಲಿ ಕಾಯಕ ಪೂಜೆಯ ಆಚೆಗಿರುವ ಸ್ವರ್ಗಸದೃಶ ಅನುಭವ ಕೊಡುತ್ತದೆ.

ಶರಣರ ದೃಷ್ಟಿಯಲ್ಲಿ ಕಾಯಕ ದೇಹದಿಂದ ಕೈಕೊಂಡು ಪೂಜೆಯಾಗಿದೆ. ಅದೊಂದು ಲಿಂಗಪೂಜೆಗಿಂತ ಗುರುವಿನ ಸೇವೆಗಿಂತ ಜಂಗಮದಾಸೋಹಕ್ಕಿಂತ ಮಹತ್ವದ್ದಾಗಿದೆ. ಕಾಯಕವೆಂದರೆ ಕರ್ಮಯೋಗ ಉತ್ + ಯೋಗ ಅಂದರೆ ಉದ್ಯೋಗವಾಗಿದೆ. ಮನುಷ್ಯನನ್ನು ಉನ್ನತ ಮಾರ್ಗಕ್ಕೆ ಒಯ್ಯುವ ಒಂದು ಸಾಧನವಾಗಿದೆ.

ಎರಡನೆಯದಾಗಿ, ಕಾಯದಿಂದ ಮಾಡಿದ ದುಡಿಮೆಯೇ ಕಾಯಕವೆನಿಸಿಕೊಳ್ಳುತ್ತದೆ. ಇದನ್ನೇ ಜೀಸಸ್ ಕ್ರೈಸ್ತ 'Eat thy bread through the sweat of thy brow' - ನಿನ್ನ ಬೆವರ ಹನಿಯಿಂದ ಬಂದ ರೊಟ್ಟಿಯನ್ನು ಮಾತ್ರ ತಿನ್ನು ಎಂದು ಹೇಳಿದ. ಶಾರೀರಕ ಶ್ರಮದಿಂದ ಬಿರುಸಾದ ಕೈಯುಳ್ಳವ ಮಾತ್ರ ಉಣ್ಣಲು ಅರ್ಹನಾಗಿದ್ದಾನೆಂದು ಟಾಲ್‌ಸ್ಟಾಯ್‌ನ ಅಭಿಪ್ರಾಯವೂ ಆಗಿದೆ.

ಶಾರೀರಿಕ ಶ್ರಮ ಉಪಜೀವನದ ಸಾಧನವಾಗಿದೆ ಅಷ್ಟೇ ಅಲ್ಲ, ಅದು ಆದರ್ಶ ಜೀವನದ ವಿಧಾನವೂ ಆಗಿದೆ. ಶಾರೀರಿಕ ಶ್ರಮದಿಂದ ಕೂಡಿದ ವೃತ್ತಿ ಮಾನಸಿಕ ಆರೋಗ್ಯವನ್ನೂ ದಯಪಾಲಿಸುತ್ತದೆ. ಅಂತೆಯೇ ಶಾರೀರಿಕ ಶ್ರಮವಿಲ್ಲದ ವ್ಯಕ್ತಿ ಸಕ್ಕರೆ ರೋಗಕ್ಕೆ ತುತ್ತಾಗುತ್ತಾನೆಂದು ಆಧುನಿಕ ವೈದ್ಯಶಾಸ್ತ್ರ ಹೇಳುತ್ತದೆ.

"ಅಪೇಕ್ಷೆ ಜೀವನದ ಅರ್ಥವಾದರೆ,
ಉಪೇಕ್ಷೆ ಸಾವಿನ ಅರ್ಥ"
-ಖಲೀಲ್ ಗಿಬ್ರಾನ್

ಆದರೆ ಕೇವಲ ತನುಬಳಲಿಸಿ ಮಾಡಿದ ಕಾರ್ಯ ಕಾಯಕವಾಗುವದಿಲ್ಲ. ಕಾಯಕದಲ್ಲಿ ಏಕಾಗ್ರತೆ ಬೇಕು; ಏಕನಿಷ್ಠೆಯಿರಬೇಕು. ಅಂದರೆ ಮಾತ್ರ ಅದು ಕಾಯಕವಾಗುತ್ತದೆ. ವ್ಯಕ್ತಿಯ ಮನಸ್ಸು ಚಿತ್ತಶುದ್ಧಿ ಭಾವಶುದ್ಧಿಗಳಿಂದ ತುಂಬಿರಬೇಕು. ಅಂದರೆ ಮಾತ್ರ ಕಾಯಕ ಅರ್ಥಪೂರ್ಣವಾಗುತ್ತದೆ.

ನಾವು ಮಾಡುವ ಕಾಯಕ ಕೇವಲ ನಮ್ಮ ಹಾಗೂ ನಮ್ಮ ಕುಟುಂಬದವರ ಉಪಜೀವನಕ್ಕಾಗಿ ಅಲ್ಲ. ಅದು ಸಮಾಜದ ಒಳಿತಿಗಾಗಿಯೂ ಇರಬೇಕೆನ್ನುವ ಎಚ್ಚರವೂ ಇರಬೇಕು. ನಮ್ಮ ಕಾರ್ಯ ಎರಡನೆಯವರ ಜೀವನಕ್ಕೆ ಅಡ್ಡ ಬರುವಂತಿರಬಾರದು. ಹಾಗೆ ಬರುವಂತಿದ್ದರೆ ಅದು ತ್ಯಾಜ್ಯವಾಗುತ್ತದೆ. ಅಂತೆಯೇ ಹಿಂದಿನ ಕಾಲದ ನಮ್ಮ ದೇಶೀ ಸಂಸ್ಕೃತಿಯಲ್ಲಿ ವ್ಯಕ್ತಿಗಳು ಕೈಕೊಂಡ ವೃತ್ತಿಗಳು ಪರಸ್ಪರ ಪೂರಕವಾಗಿದ್ದವು. ಕುಂಬಾರ ಸಮಾಜ ಗಡಿಗೆ, ಮಡಿಕೆಗಳನ್ನು ಒದಗಿಸಿದರೆ, ಬಡಿಗ ಮನೆಯ ಬಾಗಿಲು ಕಿಡಕಿಗಳನ್ನು ಮಾಡಿಕೊಡುತ್ತಿದ್ದ, ಸಮಗಾರ ಪಾದರಕ್ಷೆಮಾಡಿ ಜನರಿಗೆ ಕೊಡುತ್ತಿದ್ದ.

ಮತ್ತೆ ನಾವು ಮಾಡುವ ಕಾಯಕದಲ್ಲಿ ಹುಸಿಯಿಲ್ಲದಿರಬೇಕು. ಮೋಸ ಮಾಡಿ ಲಂಚ ತಿಂದು ಗಳಿಸಿದ್ದು ಕಾಯಕವಲ್ಲ. ಅದು ಮೋಸಗಾರಿಕೆಯಾಗಿದೆ. ಪರವಂಚನೆಯಂತೆ ಅದು ಆತ್ಮವಂಚನೆಯೂ ಆಗಿದೆ.

ಅಷ್ಟೇ ಅಲ್ಲ, ನಾವು ಮಾಡುವ ಕಾಯಕದಲ್ಲಿ ತಾದಾತ್ಮ್ಯವಿರಬೇಕು. ಕಾಯಕದಲ್ಲಿ ನಿರತನಾದ ವ್ಯಕ್ತಿ ಬಾಹ್ಯ ಜಗತ್ತನ್ನು ಮರೆಯಬೇಕು. ತಾನು ಮಾಡುವ ಕಾಯಕದಲ್ಲಿ ಅವನಿಗೆ ಪ್ರೀತಿಯಿರಬೇಕು. ಅಂದರೆ ಮಾತ್ರ ನಮ್ಮ ಕಾಯಕದಿಂದ ಕೌಶಲ್ಯವನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ. ಅದರಿಂದ ತಾನು ಮಾಡಿದ ಕಾರ್ಯದಿಂದ ಮನುಷ್ಯ ಆನಂದಪಡುವಂತಾಗಬೇಕು. ಸುಖದ ಮೂಲಗಳಲ್ಲಿ ಕೆಲಸವೂ ಒಂದು ಎಂದು ಬರ್ಟ್ರೆಂಡ್ ರಸೆಲ್‌ರು ತಮ್ಮ Conquest of happiness (ಸುಖ ಸಾಧನ) ಎಂಬ ಗ್ರಂಥದಲ್ಲಿ ಹೇಳಿದ್ದಾರೆ.

ಕಾಯಕದಲ್ಲಿ ಮೇಲು ಕೀಳುಗಳಿಲ್ಲ. ಸಚಿವನ ವೃತ್ತಿಯೂ ಕೂಲಿಯ ವೃತ್ತಿಯೂ ಒಂದೇ ಮಟ್ಟದ್ದಾಗಿವೆ. ಇದು ಕೇವಲ ಸಮಾನತೆಗಾಗಿ ಹೇಳುವ ಮಾತಲ್ಲ. ಪ್ರತಿಯೊಬ್ಬ ವ್ಯಕ್ತಿಯ ದುಡಿಮೆಯೂ ಸಮಾಜದ ನಿರ್ವಹಣೆಗಾಗಿ ಮಹತ್ವದ್ದೇ ಆಗಿದೆ. ಇದನ್ನು ಆಧುನಿಕ ಚಿಂತಕರಾದ ರಸ್ಕಿನ್, ಟಾಲ್‌ಸ್ಟಾಯ್, ಥೋರೋ ಹಾಗೂ ಗಾಂಧೀಜಿ ಕೂಡ ಹೇಳಿದರು. ಆದರೆ ಇವರಲ್ಲಿ ಕಾಣದ ಒಂದು ವಿಶಿಷ್ಟಾಂಶ ಶರಣರ ಕಾಯಕತತ್ವದಲ್ಲಿದೆ. ಅದೇನೆಂದರೆ, ವ್ಯಕ್ತಿಯ ಕಾಯಕದಿಂದ ಆತನ ಶರೀರ, ಮನಸ್ಸು, ಹೃದಯಗಳ ಶುದ್ಧೀಕರಣವೂ ಸಾಧ್ಯವಾಗುತ್ತದೆ.

ಕಾಯಕದಲ್ಲಿ ಹೆಚ್ಚಿನ ಧನಗಳಿಸುವ ಆಶೆಯೂ ಇರುವದಿಲ್ಲ. ಅಂದಂದಿನ ದುಡಿತದಿಂದ ಅಂದಂದಿನ ದಾಸೋಹ, ಅಂದಂದಿನ ಶರಣನ ಜೀವನದ ನಿರ್ವಹಣೆಯೂ ಆಗಬೇಕು. ಅಂತೆಯೇ ಅಕ್ಕಿಯನ್ನು ಆಯುವ ಕಾಯಕ ಕೈಕೊಂಡಿದ್ದ ಮಾರಯ್ಯ ಎಂದಿನಂತೆ ಒಮ್ಮನದ ಬದಲಾಗಿ ಎರಡು ಮಾನ ಅಕ್ಕಿ ಮನೆಗೆ ತಂದಾಗ ಅವನ ಪತ್ನಿ ಅದನ್ನು ಬಸವಣ್ಣನವರ ಮಹಾಮನೆಯ ಅಂಗಳದಲ್ಲಿ ಸುರಿದು ಬರಲು ಹೇಳುತ್ತಾಳೆ.



ಮತ್ತೆ ಬಡ್ಡಿಯ ರೂಪದಲ್ಲಿ ಬಂದ ಧನವೂ ಕೂಡ ದಾಸೋಹಕ್ಕೆ ಗ್ರಾಹ್ಯವಲ್ಲವೆಂಬುದು ಶರಣರ ಸಂದೇಶವಾಗಿತ್ತು. ಅದೇ ರೀತಿ ಪಿತ್ರಾರ್ಜಿತ ಆಸ್ತಿಯಿಂದ ಬಂದ ಧನವೂ ದಾಸೋಹಕ್ಕೆ ಯೋಗ್ಯವಲ್ಲ ವೆಂದು ಶರಣರು ಹೇಳಿದರು.

ಧನವೂ ಕೂಡ ಚಿತ್ತಶುದ್ಧವುಳ್ಳವನಲ್ಲಿ ಶೇಖರವಾಗುತ್ತದೆಂದು ಹೇಳುವವರ ಜೊತೆಗೆ ಆ ಧನದ ಸದ್ವಿನಿಯೋಗವಾಗಬೇಕೆಂದು ಒತ್ತಿ ಹೇಳಿದರು.

ಕಾಯಕ ನಿಷ್ಕಾಮ ಕರ್ಮವಾಗಿರಬೇಕೆಂದು ಬಸವಣ್ಣನವರು ಯಾಕೆ ಹೇಳಿದರೆಂದರೆ ತಾನು ಆ ಕಾರ್ಯ ಮಾಡಿದೆನೆಂಬ ಅಹಂಕಾರ ಮನುಷ್ಯನ ಮನಸ್ಸನ್ನು ಕಲುಷಿತಗೊಳಿಸಬಾರದು.

ಕಾಯಕ ತನ್ನಷ್ಟಕ್ಕೆ ತಾನು ಅಪೂರ್ಣ. ಅದಕ್ಕೆ ದಾಸೋಹತತ್ವ ಕೂಡಿದಾಗಲೇ ಅರ್ಥಪೂರ್ಣವಾಗುತ್ತದೆ. ತಾನು ಕಾಯಕದಿಂದ ಗಳಿಸಿದ ಅನ್ನ ಸಾರ್ವಜನಿಕರಿಗಾಗಿ ವಿನಿಯೋಗವಾಗಬೇಕೆಂದು ಶರಣರು ಹೇಳಿದರು. ಅದನ್ನು ಗುರು ಲಿಂಗ ಜಂಗಮಕ್ಕೆ ಅರ್ಪಿಸ ಬೇಕೆಂದು ತಮ್ಮ ಕಾಲದ ಪರಿಭಾಷೆಯಲ್ಲಿ ಹೇಳಿದರು. ಗುರುಲಿಂಗ ಜಂಗಮವೆಂದರೆ ಇಂದಿನ ಕಾಲದಲ್ಲಿ ಸಾರ್ವಜನಿಕರಿಗಾಗಿ ದುರ್ಬಲರಿ ಗಾಗಿ ಎಂದು ಅರ್ಥೈಸಬೇಕಾಗಿದೆ.

ಇಂದಿನ ಕಂಪ್ಯೂಟರ್ ಯುಗದಲ್ಲಿ ಶ್ರಮದ ಸಂಸ್ಕೃತಿಯೇ ನಶಿಸುತ್ತಿದೆ. ಶಾರೀರಿಕ ಶ್ರಮದ ವೃತ್ತಿಗಳು ಕನಿಷ್ಠವೆನ್ನುವ ಅಭಿಪ್ರಾಯ ಮೂಡುತ್ತಿದೆ. ಅನುತ್ಪಾದಕ ವೃತ್ತಿಗಳೇ ವಿಶ್ವಮಾನ್ಯವಾಗುತ್ತಿವೆ. ಅಂತಹದರಲ್ಲಿ ಕಂಪ್ಯೂಟರ್‌ಗಳು ಕೂಡ ಜನರ ಶಾರೀರಿಕ ಶ್ರಮದ ಕೆಲಸದ ಅಸ್ತಿತ್ವವನ್ನೇ ನಾಶ ಮಾಡುತ್ತಿವೆ. ಶಾರೀರಿಕ ದುಡಿಮೆಯಿಲ್ಲದೆ ಮನುಷ್ಯ ದೈಹಿಕವಾಗಿ ಮಾನಸಿಕವಾಗಿ ದುರ್ಬಲನೂ ಅಶಾಂತನೂ ಆಗುವ ಭಯವಿದೆ. ●

## ಭಾರತ - ಕೆಲವು ಸಂಗತಿಗಳು

* ಅಮೇರಿಕಾದಲ್ಲಿ ೩.೨೨ ದಶಲಕ್ಷದಷ್ಟು ಭಾರತೀಯರಿದ್ದಾರೆ.
* ಅಮೇರಿಕಾದಲ್ಲಿರುವ ವೈದ್ಯರಲ್ಲಿ ಶೇ. ೩೮ ಭಾಗ ಭಾರತೀಯರು; ವಿಜ್ಞಾನಿಗಳಲ್ಲಿ ಶೇ. ೧೨ ಭಾಗ ಭಾರತೀಯರು.
* ಅಮೇರಿಕಾದ ವೈಮಾನಿಕ ವಿಜ್ಞಾನ ಮತ್ತು ಬಾಹ್ಯಾಕಾಶ ನಿರ್ವಹಣಾ (NASA) ಸಂಸ್ಥೆಯಲ್ಲಿರುವ ಉದ್ಯೋಗಿಗಳಲ್ಲಿ ಶೇ. ೩೬ ಭಾಗ ಭಾರತೀಯರು.
* ಅಮೇರಿಕಾದ ಮೈಕ್ರೋಸಾಫ್ಟ್ ಉದ್ಯೋಗಿಗಳಲ್ಲಿ ಶೇ. ೩೪ ಭಾಗ ಭಾರತೀಯರು.
* ಐ.ಬಿ.ಎಂ. ಉದ್ಯೋಗಿಗಳಲ್ಲಿ ಶೇ. ೨೮ ಭಾಗ ಭಾರತೀಯರು; ಇಂಟೆಲ್ ಉದ್ಯೋಗಿಗಳಲ್ಲಿ ಶೇ. ೧೭ ಭಾಗ ಭಾರತೀಯರು.
* ಜೆರಾಕ್ಸ್ ಉದ್ಯೋಗಿಗಳಲ್ಲಿ ಶೇ. ೧೩ ಭಾಗ ಭಾರತೀಯರು.
* ಅಮೇರಿಕಾದಲ್ಲಿರುವ ಭಾರತೀಯರಲ್ಲಿ ಶೇ. ೨೩ ಭಾಗಕ್ಕೆ ಹಸಿರು ಕಾರ್ಡ್ ಲಭ್ಯವಿದೆ.
* ಚರಿತ್ರೆಯ ಕಳೆದ ಒಂದು ಸಾವಿರ ವರ್ಷಗಳಲ್ಲಿ ಭಾರತವು ಯಾವುದೇ ದೇಶದ ಮೇಲೆ ಆಕ್ರಮಣ ಮಾಡಿಲ್ಲ.
* ಅಂಕಿ-ಸಂಖ್ಯೆಗಳ ಪದ್ಧತಿಯೊಂದಿಗೆ 'ಸೊನ್ನೆ'ಯನ್ನು ಕಂಡುಕೊಂಡದ್ದು ಭಾರತ.
* ವಿಶ್ವದ ಮೊದಲ ವಿಶ್ವವಿದ್ಯಾಲಯ ಸ್ಥಾಪನೆಯಾದುದು ಕ್ರಿ.ಪೂ. ೭೦೦ರಲ್ಲಿ; ಭಾರತದ ತಕ್ಷಶಿಲೆಯಲ್ಲಿ. ಆ ವಿಶ್ವವಿದ್ಯಾಲಯದಲ್ಲಿ ವಿಶ್ವದ ನಾನಾ ಭಾಗದ ೧೦,೦೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ೬೦ಕ್ಕೂ ಹೆಚ್ಚು ವಿಷಯಗಳನ್ನು ಅಧ್ಯಯನ ಮಾಡುತ್ತಿದ್ದರು.
* ಕ್ರಿ.ಪೂ. ೪ನೆಯ ಶತಮಾನದಲ್ಲಿದ್ದ ನಳಂದ ವಿಶ್ವವಿದ್ಯಾಲಯ ಪ್ರಾಚೀನ ಶಿಕ್ಷಣ ಕ್ಷೇತ್ರದಲ್ಲಿ ಅದ್ಭುತ ಸಾಧನೆ ಮಾಡಿತ್ತು.
* ಯುರೋಪಿನ ಬಹುತೇಕ ಭಾಷೆಗಳಿಗೆ ಸಂಸ್ಕೃತ ತಾಯಿಯಂತಿದ್ದು ಆಧುನಿಕ ಕಂಪ್ಯೂಟರ್ ಸಾಫ್ಟ್‌ವೇರ್‌ಗೂ ಸೂಕ್ತವಾದ ಭಾಷೆಯಾಗಿದೆ.
* ಮಾನವ ಜನಾಂಗಕ್ಕೆ ಅತ್ಯಂತ ಹಿಂದಿನಿಂದ ಪರಿಚಯವಿರುವ ಔಷಧ ಪದ್ಧತಿಯೆಂದರೆ ಭಾರತದ ಆಯುರ್ವೇದ. ೨೦೦೦ ವರ್ಷಗಳಷ್ಟು ಹಿಂದೆಯೇ ಈ ಪದ್ಧತಿಯ ಜನಕನೆಂದು ಕರೆಯಲ್ಪಟ್ಟಿರುವ ಚರಕ ಆಯುರ್ವೇದವನ್ನು ಕ್ರೋಢೀಕರಿಸಿದ. ಇಂದು ಆಯುರ್ವೇದ ವಿಶ್ವಾದ್ಯಂತ ಜನಪ್ರಿಯವಾಗುತ್ತದೆ.
* ಭಾರತದ ಬಗ್ಗೆ ಬಡತನ ಮತ್ತು ಅಭಿವೃದ್ಧಿ ಕೊರತೆಯ ಚಿತ್ರವನ್ನು ನೀಡಲಾಗುತ್ತಿದ್ದರೂ, ಬ್ರಿಟಿಷರು ೧೭ನೆಯ ಶತಮಾನದಲ್ಲಿ ಆಕ್ರಮಿಸುವ ಮುನ್ನ ಜಗತ್ತಿನಲ್ಲೇ ಅತ್ಯಂತ ಶ್ರೀಮಂತ ರಾಷ್ಟ್ರವೆನಿಸಿತ್ತು.
* ಸಮುದ್ರಯಾನದ ಕಲೆ ಜನ್ಮತಾಳಿದ್ದು ೬೦೦೦ ವರ್ಷಗಳ ಹಿಂದೆ ಸಿಂಧೂನದಿಯಲ್ಲಿ.
* ಭೂಮಿಯು ಸೂರ್ಯನನ್ನು ಸುತ್ತಲು ೩೬೫೨೫೮೭೫೬೪೮೪ ದಿನಗಳು ಬೇಕಾಗುತ್ತದೆಂದು ೫ನೆಯ ಶತಮಾನದಲ್ಲೇ ಭಾರತದ ಭಾಸ್ಕರಾಚಾರ್ಯ ಎಂಬ ಖಗೋಳ ತಜ್ಞ ಲೆಕ್ಕ ಹಾಕಿದ್ದ.

(ಸಂಗ್ರಹ)







# ಹೊಸ ಗಾಯವಾಯಿತಯ್ಯಾ; ನಗೆ ಮಾಯವಾಯಿತಯ್ಯಾ

-ಪ್ರೊ. ಬಿ.ಆರ್. ಪೋಲಿಸ್ ಪಾಟೀಲ
ಪ್ರಾಚಾರ್ಯರು, ಎಸ್.ಆರ್.ಎ. ಸಂ.ಪ.ಪೂ. ಮಹಾವಿದ್ಯಾಲಯ, ಬನಹಟ್ಟಿ

ಯಾಕೆ, ನಗೆ ಯಾಕೆ ಅಪರೂಪವಾಗುತ್ತಿದೆ ಇತ್ತೀಚೆಗೆ? ಇದು ಬರಿ ಪ್ರಶ್ನೆಯಲ್ಲ; ಬಿಸಿಯುಸಿರು. ಕಣ್ಣು ಹರಿಯುವತನಕ, ದೃಷ್ಟಿ ಸಾಗುವತನಕ ಹೆರಿಗೆಗೆ ಅಣಿಯಾಗಿರುವ ಆತಂಕದ ಬಸಿರು!

ವಿಜ್ಞಾನದ ಪ್ರಭಾವ ಮತ್ತು ಪಾರಮ್ಯ ಹೆಚ್ಚಿದಂತೆ ಜೀವನಕ್ರಮದಲ್ಲಿ ಅಗಾಧವಾದ ಸುಧಾರಣೆಗಳಾಗಿವೆ. ಸುಖದ ಎನ್ನುವುದಕ್ಕಿಂತ ಉನ್ಮಾದದ ಹೊಸ ಮಜಲುಗಳು ಆಕಾಶದೆತ್ತರಕ್ಕೆ ಬೆಳೆದು ನಿಂತಿವೆ. ಅಂಬೆಗಾಲಿಡುತ್ತಿರುವ ಕೂಸಿನ ಕೈಯಲ್ಲೂ ಮೊಬೈಲ್ ಫೋನು, ಮಿನಿ ಕಂಪ್ಯೂಟರ್‌ಗಳಂಥ ಹೊಸಹೊಸ, ವಿಸ್ಮಯ ಹುಟ್ಟಿಸುವ ಯಂತ್ರಗಳು ರಾರಾಜಿಸುತ್ತಿವೆ; ವೈದ್ಯಕೀಯ ಚಿಕಿತ್ಸೆಯ ಸ್ವರೂಪದಲ್ಲಿ ಕ್ರಾಂತಿಕಾರಿ ಬದಲಾವಣೆಗಳಾಗಿವೆ; ಮನರಂಜನೆಯ ಹೊಚ್ಚ ಹೊಸ ರೂಪಗಳು ಜನ್ಮತಳೆದಿವೆ; ಮುದ್ರಣ ಹಾಗೂ ಮಾಧ್ಯಮ ಪ್ರಪಂಚಗಳು ಹಿಂದಿಲ್ಲದಷ್ಟು ಹರವನ್ನೊದಗಿಸಿವೆ; ಸಂವಹನ ಹಾಗೂ ಸಂಪರ್ಕ ವಿಧಾನದಲ್ಲಿ ನಂಬಲಾಗದಂಥ ಜಾದೂ ಸಂಭವಿಸಿದೆ....!

ಇಷ್ಟೆಲ್ಲ ಸಾಧನೆಗೂ ಕಾರಣನಾದ ಮನುಷ್ಯ ಇತರ ಪ್ರಾಣಿಗಳಿಂತ ಹೆಚ್ಚು ಪ್ರಸನ್ನನಾಗಬೇಕಿತ್ತು; ಬದುಕನ್ನು ಜಯಿಸಿ ಬೀಗಬೇಕಿತ್ತು. ಆದರೆ ಹಾಗಾಗಲಿಲ್ಲ ಯಾಕೆ?

ಯಾಕೆಂದರೆ, ವಿಜ್ಞಾನದ ಬಲದಿಂದ ಮನುಷ್ಯ ಲೌಕಿಕವಾದ ಏನೆಲ್ಲವನ್ನು ಪಡೆದುಕೊಂಡಿದ್ದರೂ ಪಾರಲೌಕಿಕ (ಅಂತರ್)ದೃಷ್ಟಿ ಕಳೆದುಕೊಂಡು ಕುರುಡನಾಗಿದ್ದಾನೆ; ಸರ್ವರೋಗಗಳಿಗೂ ಸಂಜೀವಿನಿಯಾಗಬಲ್ಲ ನಗೆಮದ್ದು ಕಳೆದುಕೊಂಡಿದ್ದಾನೆ.

ಮೋಸ, ವಂಚನೆ, ಲಂಚಗುಳಿತನ, ಭ್ರಷ್ಟಾಚಾರ, ಸ್ವಾರ್ಥ, ಸ್ವಜನ ಪಕ್ಷಪಾತ, ಅನಾದರ, ಅನಾಸ್ಥೆ, ಅರಾಜಕತೆ, ಪರಾಙ್ಮುಖತೆ -ಇವು ಆಧುನಿಕ ಜಗತ್ತಿನ ಹೊಸರೋಗಗಳು; ಮನೋಕ್ಲೇಶ, ಮಾನಸಿಕ ಒತ್ತಡ ಇವುಗಳ ಉಪ ಉತ್ಪಾದನೆಗಳು. ದೇಹದ ವ್ಯಾಧಿಗಳಿಗೆ ವಿಜ್ಞಾನ ಚಿಕಿತ್ಸೆ ಒದಗಿಸಬಹುದು. ಆದರೆ ಮನೋವ್ಯಾಧಿಗಳಿಗಲ್ಲ. ಮೇಲೆ ಹೆಸರಿಸಿದ ಎಲ್ಲ, ಎಲ್ಲ ಮನಸ್ಸಿಗೆ ಸಂಬಂಧಿಸಿದ, ಹೃದಯ ಮಾಲಿನ್ಯದಿಂದ ಹುಟ್ಟಿಕೊಂಡ ರೋಗಗಳು. ಇವುಗಳಿಗೆ ಚಿಕಿತ್ಸೆ ಕ್ಲೇಶ ಮರೆತು ನಗುವುದರಲ್ಲಿದೆ; ದ್ವೇಷ ಮರೆತು ಪ್ರೀತಿಸುವುದರಲ್ಲಿದೆ.

*ಒಂದು ನಗಿಯಂದರಽ ಹಂಡೆ ಹಾಲಿದ್ದಾಂಗ*
*ಕುಡಿಯುಽತ ಮುಂದೆ ನಡಿಬೇಕ-ನಗಿಹಾಲ*
*ಹಂಚುಽತ ಬಾಳ ಗೆಲಬೇಕ.*

ನಗೆ ಬೇಕು ಬಾಳಿಽಗೆ, ನಗೆ ಬೇಕು ನಾಳಿಽಗೆ
ನಗಲಾರದ ಬಾಳು ನಗೆಗೇಡು-ಶರಣಽರ
ನಗಿಯಾಯ್ತು ಬಸವಕಲ್ಯಾಣ.[1]

ಈ ತ್ರಿಪದಿಗಳ ತಾತ್ಪರ್ಯ ನಗೆಯ ನಿಧಿಯ ಸದ್ಬಳಕೆ ಮಾಡಬೇಕೆಂಬುದೇ ಆಗಿದೆ. ಶರಣರ ನಗೆಯೆ ಬಸವ ಕಲ್ಯಾಣವನ್ನು ಸೃಷ್ಟಿಮಾಡಿತು ಎಂಬುದು ಕಾವ್ಯಸತ್ಯವಾದರೂ ಅತಿಶಯೋಕ್ತಿಯೇನಲ್ಲ. ಸರ್ವರೂ ಸುಖಿಯಾಗಿರಲಿ, ಸರ್ವರಿಗೂ ಕಲ್ಯಾಣವಾಗಲಿ ಎಂದು ಬಯಸುವ ಹೃದಯದಿಂದ ಹೊರಹೊಮ್ಮುವ ನಗೆ ಮತ್ತು ಆನಂದ ಅಗಾಧವಾದ ಸಂಪತ್ತು. ಶರಣರು ಎಂದರೆ ಯಾರು, ಹನ್ನೆರಡನೆಯ ಶತಮಾನದಲ್ಲಿ ಮಾತ್ರ ಜೀವಿಸಿದ್ದವರೆ?

*ಶರಣಽರ ನೆನೆದರ ಸರಗಿಽಯ ಇಟ್ಟಾಂಗ*
*ಅರಳು ಮಲ್ಲಿಽಗಿ ಮುಡಿದ್ಹಾಂಗ-ಸರುಹೊತ್ತು*
*ಶರಣರ ನೆನಿಯೊ ಎಲೆಮನವೆ*

ಎಂಬ ಹಾಡು ಹಾಡುತ್ತಿದ್ದ ನನ್ನ ಅವ್ವನನ್ನು ನಾನು ಸಣ್ಣವನಿದ್ದಾಗ "ಯವ್ವಾ, ಯಾರಿವರು ಶರಣರು, ಎಲ್ಲಿರತಾರ?" ಎಂದು ಕೇಳಿದ ಪ್ರಶ್ನೆಗೆ ನಿರಕ್ಷರಿ ನನ್ನವ್ವ ನೀಡಿದ ಉತ್ತರ :

*ಎಲ್ಯಾರ ಶರಣಽರ ಇಲ್ಲೇ ಕಾಣಸುತಾರ*
*ಮಲ್ಲಿಗ್ಹೂವಿನಾಗ ಅಡಗ್ಯಾರ ತಮ್ಮಾ, ಇಲ್ಲೇ ಕಾಣಸುತಾರ್*

ಎಂಥ ಜೀವನಾನುಭವ ಅದು! ಮಲ್ಲಿಗ್ಹೂವಿನಾಗ ಅಡಗ್ಯಾರ, ಇಲ್ಲೇ ಕಾಣಸುತಾರ ಎಂಬುದು ಜನಪದರ ನಂಬಿಗೆಯ ಜಗತ್ತಿನ ಕಾಲಾತೀತವಾದ ಮೌಲ್ಯ. ಯಾರ ಮಾತು, ಮನಸ್ಸು ಮಲ್ಲಿಗ್ಹೂವಿನಂತಿರುವುದೋ ಅವರೇ ಶರಣರು ಎಂಬ ಸತ್ಯವನ್ನು ಅರಿತ ಎಲ್ಲರೂ ಹೊಗೆ ಮರೆತು ನಗಬಹುದು; ಹಗೆ ಮರೆತು ಪ್ರೀತಿಸಬಹುದು.

---

೧. ಸ್ವರಚಿತ ತ್ರಿಪದಿಗಳು.
೨-೩. ಜನಪದ ರಚನೆಗಳು.



ವಿಜ್ಞಾನ ನೀಡಿದ ಸಹಸ್ರಬಾಹುಗಳಿಂದ ಐಹಿಕ ಸಂಪತ್ತನ್ನು ಬಾಚಿಕೊಳ್ಳುತ್ತಿರುವ ಕೊಳ್ಳುಬಾಕ ಮಾನವರು:

*ಹೆಣ್ಣು ಹೊನ್ನು ಮಣ್ಣು ಇವು ಮೂರ*
*ಬಿಟ್ಟರೆಲ್ಲ ಸುಳ್ಳು ಅಂದಾರ*
*ಮುಗಲಮ್ಯಾಗಿನ ಚಿಕ್ಕಿ ಎಣಿಸುವರು*
*ಹೊಟ್ಯಾಗಿನ ಕಳ್ಳ ಮರತಾರ..."*

ಎಂಬುದು ಕೇವಲ ನನ್ನ ಅಭಿಪ್ರಾಯವಲ್ಲ. ಹೊಂದಿಕೊಂಡು ಬಾಳಲೊಲ್ಲದ ಹೊಲೆ ದಗ್ಗುದುಳಿದು ಮಾಡಿದ ಗಾಯ ಮಾಯಿಸುವ ಬಗೆ ನಗೆಯಲ್ಲಿದೆ; ಹಂಚಿಕೊಂಡು ಉಣ್ಣುವುದರಲ್ಲಿದೆ. ನಾವು ಪಡೆದುಕೊಳ್ಳುವ ಎಲ್ಲವೂ ಭಗವಂತ ಎಲ್ಲರಿಗೆಂದು ಮಾಡಿಟ್ಟ ಅಡಿಗೆ. ಅದನ್ನು 'ಪ್ರಸಾದ' ಎಂದು ಹಂಚಿಕೊಂಡು ತಿನ್ನುವುದು ಧರ್ಮ; ಬಾಚಿಕೊಂಡು ಬಚ್ಚಿಡುವುದು ಅಧರ್ಮ. ಇಂಥ ಅಧರ್ಮದ ತಮಂಧ ಎಲ್ಲೆಡೆಗೂ ಆವರಿಸಿದಾಗ ನಗೆ ಹೇಗೆ ಹುಟ್ಟೀತು!

ಎಲ್ಲರೂ ಕೊಟ್ಟಿದ್ದನ್ನು ಕೆಡದಂತಿಟ್ಟು ಅವರವರ ಧರ್ಮ ಪಾಲಿಸುವಲ್ಲಿ ಬೇಡವೆಂದರೂ ಆನಂದ ಉಕ್ಕೇರುತ್ತದೆ. ಒಳಗಿನ ಆನಂದವೇ ನಗೆಯ ಮೂಲ. ಒಳ್ಳೆಯದನ್ನು ಬರೆಯುವುದು, ಒಳ್ಳೆಯದನ್ನು ನುಡಿಯುವುದು, ನುಡಿದಂತೆ ನಡೆಯುವುದು, ದುಡಿಮೆಗೆ ತಕ್ಕಷ್ಟು ಪಡೆಯುವುದು, ಪಡೆದುದನ್ನು ಹಂಚಿ ದಾಸೋಹಿಯಾಗಿ ಅಹಂಕಾರ ಅಳಿಯುವುದು - ಇದೆಲ್ಲ ಧರ್ಮಸಮ್ಮತ ಜೀವನಕ್ರಮ. ಕ್ರಮತಪ್ಪಿ ನಡೆದರೆ ತಪ್ಪಿದ್ದಲ್ಲ ಈ ಉದ್ಗಾರ; ಗಾಯವಾಯಿತಯ್ಯಾ, ನಗೆ ಮಾಯವಾಯಿತಯ್ಯಾ!

೪. ಸ್ವರಚಿತ ತತ್ವಪದ - ಈಟುದ್ದ ಚೇಳಿನ ಕೊಂಡಿ....'ಹೆಂತಾ ಚೆಂದಿತ್ತು ಹಿಂದುಸ್ತಾನ' ಲಾವಣಿ ಸಂಕಲನದಿಂದ.

## ಪ್ರತಿಮೆ

ಬೆಟ್ಟದ ಮೇಲೆ ಒಬ್ಬ ವ್ಯಕ್ತಿ ವಾಸಿಸುತ್ತಿದ್ದ. ಅವನ ಬಳಿ ಪ್ರಾಚೀನ ಶಿಲ್ಪಿಯೊಬ್ಬ ಕೆತ್ತಿದ್ದ ಪ್ರತಿಮೆಯೊಂದಿತ್ತು. ಅದು ಅವನ ಬಾಗಿಲ ಬಳಿಯೇ ಮುಖ ಕೆಳಗು ಮಾಡಿಕೊಂಡಿತ್ತು. ಅವನೆಂದೂ ಆ ಪ್ರತಿಮೆಯ ಕಡೆ ಗಮನ ಕೊಟ್ಟಿರಲಿಲ್ಲ.

ಒಂದು ದಿನ ನಗರದ ಜ್ಞಾನಾನುಭವದ ವ್ಯಕ್ತಿಯೊಬ್ಬ ಅವನ ಮನೆಯ ಮುಂದೆ ಹಾದು ಹೋಗುವಾಗ ಆ ಪ್ರತಿಮೆಯನ್ನು ಕಂಡು 'ಅದನ್ನು ಮಾರಾಟ ಮಾಡಬಲ್ಲೆಯಾ?' ಎಂದು ಮಾಲೀಕನನ್ನು ಕೇಳಿದ. ಆಗ ಮಾಲೀಕ ನಕ್ಕು 'ಅಯ್ಯೋ ಮಹರಾಯಾ, ಆ ಜಡ ಮತ್ತು ಕೊಳಕು ಕಲ್ಲನ್ನು ಯಾರು ಕೊಳ್ಳುತ್ತಾರಪ್ಪ ?' ಎಂದ.

ಅದಕ್ಕೆ ನಗರದ ವ್ಯಕ್ತಿ "ನಾನು ಅದಕ್ಕೆ ಈ ಬೆಳ್ಳಿ ನಾಣ್ಯ ಕೊಡುತ್ತೇನೆ" ಅಂದ. ಇದನ್ನು ಕೇಳಿ ಆ ಮಾಲೀಕನಿಗೆ ಸೋಜಿಗವೆನಿಸಿತು; ಸಂತೋಷವೆನಿಸಿತು. ಸರಿ, ಆ ಪ್ರತಿಮೆಯನ್ನು ಆನೆಯ ಮೇಲೆ ನಗರಕ್ಕೆ ಸಾಗಿಸಲಾಯಿತು.

ಕೆಲವು ತಿಂಗಳು ಕಳೆದ ನಂತರ ಆ ವ್ಯಕ್ತಿ ಬೆಟ್ಟದಿಂದ ಇಳಿದು ನಗರಕ್ಕೆ ಭೇಟಿ ನೀಡಿದ. ಅಲ್ಲಿನ ಬೀದಿಗಳಲ್ಲಿ ಹೋಗುತ್ತಿದ್ದಾಗ ಒಂದು ಕಡೆ ಅಂಗಡಿಯೊಂದರ ಮುಂದೆ ಜನ ಜಂಗುಳಿಗೊಂಡಿದ್ದುದನ್ನು ಕಂಡ. ಅಲ್ಲೊಬ್ಬ ವ್ಯಕ್ತಿ ದೊಡ್ಡ ದನಿಯಲ್ಲಿ "ಓ ಬನ್ನಿ, ಒಳಗೆ ಬನ್ನಿ, ಜಗತ್ತಿನಲ್ಲೇ ಅತ್ಯಂತ ಸುಂದರವಾದ, ವಿಸ್ಮಯಕಾರಿಯಾದ ಪ್ರತಿಮೆಯನ್ನು ನೋಡಿರಿ. ಓರ್ವ ಮಹಾನ್ ಶಿಲ್ಪಿಯ ಈ ಅತ್ಯಂತ ಅದ್ಭುತ ಕಲಾಕೃತಿ ನೋಡಲು ಕೇವಲ ಎರಡು ಬೆಳ್ಳಿ ನಾಣ್ಯಗಳು" ಎಂದು ಕೂಗುತ್ತಿದ್ದ. ತಾನೂ ಎರಡು ಬೆಳ್ಳಿ ನಾಣ್ಯ ಕೊಟ್ಟು ಒಳಗೆ ಹೋದ. ಗುಡ್ಡದ ಮನುಷ್ಯನ ಸಹಜ ಕುತೂಹಲ. ಅಲ್ಲಿ ನೋಡಿದ್ದೇನು? ತಾನೇ ಒಂದು ಬೆಳ್ಳಿ ನಾಣ್ಯಕ್ಕೆ ಮಾರಿದ್ದ ಪ್ರತಿಮೆಯನ್ನು!

-ಖಲೀಲ್ ಗಿಬ್ರಾನ್







# ಸರ್ವಜ್ಞನ ವಚನಗಳು-ಒಂದು ಜಾನಪದೀಯ ಅಧ್ಯಯನ

-ವಾಸುದೇವ ಕಾಣೆಮಾರ್
೭ಬಿ, ಶಾಂತಿನಿಕೇತನ್, ೧೯, ಎಲ್.ಜೆ. ರಸ್ತೆ, ಮುಂಬಯಿ

**ಕಿರುವಿಮರ್ಶೆ**

ಡಾ. ರಾಜಶೇಖರ ಜಮದಂಡಿಯವರ ಡಾಕ್ಟರೇಟ್ ಪ್ರಬಂಧವಿದು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಇದನ್ನು ಪ್ರಕಟಿಸಿದುದು ಯೋಗ್ಯವಾಗಿದೆ. ಸುಮಾರು ೨೦೦ ವರ್ಷಗಳಿಗೂ ಹಿಂದೆ ತಿಂದುಣ್ಣುವ ಸಂನ್ಯಾಸಿ ಬಾಳ್ವೆ ಮಾಡಿದ್ದ ಮತ್ತು ಜನನಾನುಭವದಿಂದ ಪಕ್ವನಾಗಿದ್ದ 'ಸರ್ವಜ್ಞ'ನೆಂಬಾತ (ಅದು ಅವನ ನಿಜ ಹೆಸರನ್ನು ಮರೆಯಾಗಿಸಿದೆ) ರಾಜಾಶ್ರಯ ಒಲ್ಲದ ಹಳ್ಳಿ ಪಂಡಿತ (ಜನ್ಮಸ್ಥಾನ ಧಾರವಾಡ ಜಿಲ್ಲೆಯ ಅಂಬಲೂರು, ತಂದೆ ಬಸವರಸನೆಂಬಾತ). ಇವನು ಜನಸಾಮಾನ್ಯರ ಬದುಕಿನಲ್ಲಿ ಕಂಡುಬರುವ ನೀತಿಯ ಅವನತಿಯನ್ನು ಟೀಕಿಸಿ ಕವಿತಾ ತ್ರಿಪದಿಗಳನ್ನು ರಚಿಸಿದ. ಅವುಗಳಲ್ಲಿ ಒಂದೊಂದೂ ಚಿರಸ್ಮರಣೀಯವಾದ ಅನುಭವದ ವಚನವಾಗಿದೆ. ಇವನ ಮಾತು ಒರಟು, ಮನಸ್ಸು ಮೃದು. ಕೇಳುಗರಿಗೆ ಮನಮುಟ್ಟುವಂತೆ ಗಟ್ಟಿಯಾಗಿ ನುಡಿವುದು ಇವನ ಜಾಯಮಾನ. ಸಮಾಜದ ಡೊಂಕುಗಳನ್ನು ತನ್ನ ನೇರ ನುಡಿಗಳಲ್ಲಿ ತಿಳಿಯಪಡಿಸಿದ್ದಾನೆ. ತಾನು ಶಿಷ್ಟ ಕವಿಯಾಗಿದ್ದರೂ ಜನಪ್ರಿಯ ದಾಟಿಯಲ್ಲಿ ಪದ್ಯ ತ್ರಿಪದಿಗಳನ್ನು ವಚನಗಳಂತೆ ರಚಿಸಿದ ಸರ್ವಜ್ಞನು ಕನ್ನಡ ಸಾಹಿತ್ಯವು ಕಂಡ ಸಮಾಜೋದ್ಧಾರಕ ಕ್ರಾಂತಿಯ ಕಿಡಿಯಾಗಿದ್ದ. ಸಾಮಾಜಿಕರಲ್ಲಿ ಹಬ್ಬಿದ ಹಲವು ರೀತಿಯ ಮೌಢ್ಯ, ಕಷ್ಟ, ದೋಷ, ಸ್ವಾರ್ಥಪರತೆ ಮತ್ತು ವಿಭಜನಾವೃತ್ತಿ ಇವೆಲ್ಲವುಗಳ ಬಗ್ಗೆ ಅವನಲ್ಲಿ ಮರುಕವಿತ್ತು. ಮಾನವತಾವಾದಿಯಾದ ಅವನು ಅವುಗಳ ಸಹಜತೆಯನ್ನು ಗಮನಿಸಿ ನಗು, ತಿರಸ್ಕಾರ, ಸಿಟ್ಟು, ಸಂತಾಪಗಳಿಂದ ಸಿಡಿದಿದ್ದನು. ತಾನು ಬಯಸುವ ಸಮಾಜ ಹೇಗಿರಬೇಕೆಂಬುದನ್ನು ಸೂಚಿಸಿದನು. ಅವನ ವಚನಗಳಲ್ಲಿ ವೈರಾಗ್ಯಕ್ಕಿಂತ ವಿವೇಕವು ಹೆಚ್ಚಾಗಿದೆ. ಜಾನಪದ ಸಾಹಿತ್ಯದಲ್ಲಿ ಜನರಿಗೆ ಅರ್ಥವಾಗಬಲ್ಲ ಉಪಮೆಗಳನ್ನು, ಗಾದೆ, ಒಗಟುಗಳನ್ನು ಅಲಂಕಾರಿಕವಾಗಿ ಬಳಸಿದ್ದಾನೆ. ಸುಲಭ ಪ್ರಶ್ನೋತ್ತರ ಮಾಡಿ ನಿರ್ಣಯಿಸಿಕೊಳ್ಳುವ ಜಾಣ್ಮೆಯ ನುಡಿಗಳಿವು. ಅವುಗಳ ವಿಷಯ ಮತ್ತು ಸಂದೇಶಗಳು ಹೆಚ್ಚಿನ ಪಕ್ಷದಲ್ಲಿ ಎಲ್ಲ ಕಾಲವನ್ನು ಮೀರಿ ನಿಲ್ಲಬಲ್ಲವಾಗಿದ್ದು ಕನ್ನಡಿಗರಿಗೆ ಮತ್ತು ಸ್ವಲ್ಪಮಟ್ಟಿಗೆ ಕನ್ನಡೇತರರಿಗೆ ಪ್ರಯೋಜನ ಕೊಡಬಲ್ಲವು. ಸಣ್ಣಪುಟ್ಟ ಶಬ್ದಗಳಿಂದ ಕೆಲವೊಮ್ಮೆ ಪರಿಪಕ್ವ ಅನುಭವವನ್ನು ಅತೀಂದ್ರಿಯವಾದ 'ಅನುಭಾವ'ವನ್ನು ಇಲ್ಲಿ ಕಾಣಬಹುದು. ಅವನ ವಚನಗಳು ಒಂದು ಚಿಕ್ಕ ವಿಶ್ವಕೋಶದಂತೆ ಇದ್ದು ನಮ್ಮ ಸಾಂಸ್ಕೃತಿಕ ವಿಚಾರಗಳಲ್ಲಿ ಅಡಕವಾಗಿರಿಸಿರುವುದು ಕಂಡುಬರುತ್ತದೆ.

ಪ್ರಸ್ತುತ ಕೃತಿಯಲ್ಲಿ ಕವಿಯ ಜಾನಪದ ಭೂಮಿಕೆಯ ಬಗ್ಗೆ ಒಂದು ಅಧ್ಯಾಯವಿದೆ. ಸರ್ವಜ್ಞನ ಕಾಲದ ಹಿನ್ನೆಲೆಯಲ್ಲಿರುವ ಸಾಂಸ್ಕೃತಿಕ ಚಿತ್ರಗಳು, ಮೌಲ್ಯಗಳು ಮತ್ತು ಜಾನಪದ ವೃತ್ತಿಗಳ ಬಗೆಗೆ ಒಂದೊಂದು ಅಧ್ಯಾಯವಿದೆ. ಮೊದಲನೆ ಅಧ್ಯಾಯದಲ್ಲಿ ಜಾನಪದ ಮತ್ತು ಶಿಷ್ಟ ಕಾವ್ಯಗಳಲ್ಲಿರುವ ವ್ಯತ್ಯಾಸಗಳ ಬಗೆಗೆ ವಿದ್ವಾಂಸ ಚರ್ಚೆಯಿದೆ. ಕೊನೆಯ ಅಧ್ಯಾಯದಲ್ಲಿ ಜಾನಪದ ಸಾಹಿತ್ಯ ಪ್ರಕಾರಗಳಾದ ತ್ರಿಪದಿಯೆಂಬ ಹನಿಗವನದಲ್ಲಿ ಸರ್ವಜ್ಞನ ಪದಗಳ ಮತ್ತು ಭಾಷೆಯ ಔಚಿತ್ಯ, ಅವುಗಳಲ್ಲಿರುವ ಬೈಗುಳ ನುಡಿಗಳು, ವಿಜಾತಿ ಪದಗಳು, ಗಾದೆಗಳು, ಒಗಟುಗಳು, ಪುರಾಣಜ್ಞಾನ ಇತ್ಯಾದಿ ಬಹಳ ವಿಷಯಗಳು ವಿವರವಾಗಿ ವಿಮರ್ಶಿಸಲ್ಪಟ್ಟಿವೆ (ಸುಮಾರು ೬೨ ಪುಟಗಳಷ್ಟು). ಸರ್ವಜ್ಞನ ತ್ರಿಪದಿಗಳಲ್ಲಿ ಅಧ್ಯಾತ್ಮಿಕ ವಿಷಯಗಳು, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಔದ್ಯೋಗಿಕ ಮತ್ತು ನೈತಿಕ ವಿಷಯಗಳೆಷ್ಟೋ ಬರುತ್ತವೆ. ಒಟ್ಟಿನಲ್ಲಿ ಜನಸಾಮಾನ್ಯರಿಗೆ ಕೃಷಿಪ್ರಧಾನ ವೃತ್ತಿಯೆ ಮೇಲೆಂದು, ಕುಟುಂಬದ ಸುಖವೇ ಸುಖವೆಂದು ಸರ್ವಜ್ಞ ಸಾರಿದ್ದಾನೆ (ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೆ ಮೇಲು, ಅಕ್ಕರೆಯಿಲ್ಲದ ಮನೆ ದುಕ್ಕ ಕಾಣಯ್ಯ, ಮಕ್ಕಳಿಲ್ಲದ ಮನೆಯು ರೊಕ್ಕವಿಲ್ಲದ ಬಾಳ್ವೆ, ಇತ್ಯಾದಿ). ಅರಸರ ಒಲುಮೆ ಅರಿಯದೇ ವರ್ತಿಸುವುದು ತಕ್ಕದಲ್ಲವೆಂದೂ ಜನರಿಗೆ ಬುದ್ಧಿ ಹೇಳಿದ.

ಜಾನಪದ ಸಾಹಿತ್ಯದಲ್ಲಿ ಕೌಟುಂಬಿಕ ಮತ್ತು ಸಾಮಾಜಿಕ ವಿಷಯಗಳು, ದೈವದತ್ತ, ಪಾರಂಪರಿಕ ಅಚಾರ ವಿಚಾರಗಳು ಎಲ್ಲ ಬರುತ್ತವೆ. ಆದರೆ ಸರ್ವಜ್ಞನ ತ್ರಿಪದಿಗಳಲ್ಲಿ ಜೀವನದ ಸರ್ವಕ್ಷೇತ್ರಗಳಲ್ಲಿ ಆತ ಕೃಷಿ ಮಾಡಿದುದರ ಅನುಭವವಿದೆ ಎಂದರೆ ಅದು ತಪ್ಪಾಗುತ್ತದೆ. ಅವುಗಳು ಪರಿಪೂರ್ಣವಲ್ಲ. ಆದರೆ ಸರ್ವಜ್ಞನನ್ನು ನಾವು ಇದಕ್ಕಾಗಿ ಕಡೆಗಾಣಿಸದಷ್ಟು ಪ್ರತಿಭೆ ಅವನಲ್ಲಿದೆ.

ಗ್ರಂಥದ ಮುನ್ನುಡಿಯಲ್ಲಿ ಶ್ರೀ ಶ್ರೀ ಸಂಗನಬಸವ ಮಹಾಸ್ವಾಮಿಗಳು ಹೇಳುತ್ತಾರೆ 'ಸರ್ವಜ್ಞನು ಸಹ ಮಾರ್ಕ್ಸ್, ಲೆನಿನ್ ಹಾಗೂ ಬಸವಣ್ಣನವರ ಸಮಾಜವಾದವನ್ನು ಪ್ರತಿಪಾದಿಸಿದ್ದಾನೆ' ಎಂದು. ಆದರೆ ಅವರದು ಅತಿಶಯೋಕ್ತಿ. ಯಾಕೆಂದರೆ ಹೇಳಿಕೇಳಿ ಸರ್ವಜ್ಞನೊಬ್ಬ ಕೇವಲ ನುಡಿಕಾರನು. ಅವನಲ್ಲಿ ರಾಜಕೀಯ ಹಸ್ತಕ್ಷೇಪ ಮಾಡುವುದಿರಲಿ, ಸಮಾಜವನ್ನು ಯೋಜನಾ ರೂಪದಲ್ಲಿ ಹೇಗೆ ಸುಧಾರಿಸಬೇಕೆಂಬ ಆಸಕ್ತಿಯೂ ಇದ್ದಂತಿಲ್ಲ.

ಸರ್ವಜ್ಞನು ತಾನೊಬ್ಬ ಶ್ರೇಷ್ಠಕವಿಯಾಗಬೇಕೆಂದೂ ಹವಣಿಸಿದ್ದಿಲ್ಲ. ತಮಿಳಿನಲ್ಲಿ ತಿರುವಳ್ಳುವರ್, ತೆಲುಗಿನಲ್ಲಿ ವೇಮನ, ಹಿಂದಿಯಲ್ಲಿ ಕಬೀರ್ ಸಾಹಿತಿಗಳಿದ್ದಂತೆ ಬಡತನದ ಮಡಿಲಲ್ಲಿ ಜೀವನಾನುಭವವನ್ನು ವಿಫುಲವಾಗಿ ಪಡೆದು, ಒಬ್ಬ ಯೋಗಿಯಾಗಿ ಬೆಳೆದು ಕವಿಯಾಗಿ



ನುಡಿದು ಸಮಾಜವನ್ನು ತಿದ್ದುತ್ತಿರುವ ಮಹಾನುಭಾವನು ಸರ್ವಜ್ಞನೆಂಬ ಲೇಖಕರ ಮಾತನ್ನು ನಾವು ಅನುಮೋದಿಸಬಹುದಾಗಿದೆ.

ಸರ್ವಜ್ಞನ ಎಷ್ಟೋ ತ್ರಿಪದಿಗಳು ಕಾಲಗರ್ಭದಲ್ಲಿ ಹೂತುಹೋಗಿರಬಹುದು. ಇನ್ನನೇಕ ಕವಿಗಳು ಸರ್ವಜ್ಞನ ಅಂಕಿತವನ್ನು ತಮ್ಮ ತ್ರಿಪದಿ ವಚನಕ್ಕೆ ಸೇರಿಸಿಕೊಂಡಿರಬಹುದು. ಇಸವಿ ೧೯೨೪ರಲ್ಲಿ ರೆವರೆಂಡ್ ಉತ್ತಂಗಿ ಚೆನ್ನಪ್ಪ ಅವರು ಸರ್ವಜ್ಞನವೆಂದೆ ಏಳುನೂರು ತ್ರಿಪದಿಗಳನ್ನು ಆಯ್ದು ಸಂಪಾದಿಸಿಕೊಟ್ಟ ಮೇಲೆ ಇವುಗಳಿಗೆ ಸಾವಿರಾರು ವ್ಯಾಖ್ಯಾನಗಳು ಬಂದಿವೆ, ಬರುತ್ತಲೇ ಇವೆ.

ಸಾಹಿತ್ಯವನ್ನು ಕನ್ನಡ ಜನತೆಗೆ ಬಹು ಹತ್ತಿರಕ್ಕೆ ಕೊಂಡೊಯ್ದ ವಿಚಾರವಾದಿಗಳಲ್ಲಿ ಸರ್ವಜ್ಞನು ಸರ್ವಶ್ರೇಷ್ಠರೆಂಬುದು ಲೇಖಕರ ಅಭಿಪ್ರಾಯ. ಆದರೆ ಇವನಂತೆ ೧೨ನೇ ಶತಮಾನದ ಶಿವಶರಣರೂ, ೧೬ನೇ ಶತಮಾನದ ಹರಿದಾಸರೂ, ಹಾಗೆಯೇ ಸುಭಾಷಿತಗಳ ವೃತ್ತಗಳನ್ನು ರಚಿಸಿದ ಇನ್ನನೇಕರೂ ಹಾಗೆಯೇ ಇದ್ದಾರೆಂಬುದು ನಿರ್ವಿವಾದದ ಸಂಗತಿ.

ಲೇಖಕರು ಜಾನಪದ ಮತ್ತು ಶಿಷ್ಟ ಕಾವ್ಯಗಳಲ್ಲಿರುವ ವ್ಯತ್ಯಾಸಗಳ ಕುರಿತು ಚರ್ಚಿಸಿದುದು ಸಾಕಷ್ಟು ಆಗಿಲ್ಲ. ಜಾನಪದ ಕವಿತಾರಚನೆಯ ಅರ್ಥ ಇಂಗ್ಲೀಷಿನ ಫೋಕ್‌ಲೋರ್‌ಗೆ ಸಮ ಎಂದರೆ ಸಾಲದು. ಜಾನಪದ ಎಂಬ ಶಬ್ದಕ್ಕೆ ಹಳ್ಳಿಗಾದೆ ಎಂಬ ವಾಚ್ಯಾರ್ಥವೂ ಸರಿಯಲ್ಲ. 'ಜಾನಪದ' ಶಬ್ದಕ್ಕೆ ವ್ಯಾವಹಾರಿಕ ಅರ್ಥವು 'ಗ್ರಂಥಸ್ಥವಾಗದೇ ಉಳಿದು ಬಾಯಿಂದ ಬಾಯಿಗೆ ಹರಿದು ಬಂದಿರುವ ವಾಗ್ಧಾರೆ' ಎಂಬುದು ಶತಃ ಪ್ರತಿಶತಃ ಸರಿಯಲ್ಲವಾದರೂ ಹಾಗೆನ್ನದೆ ಗತ್ಯಂತರವಿಲ್ಲ. ಎಷ್ಟೋ ಸಲ ಶಿಷ್ಟ ಮತ್ತು ಜಾನಪದ ಸಂಸ್ಕೃತಿಗಳ ನಡುವಿನ ಗೆರೆಯನ್ನು ಕರಾರುವಾಕ್ಕಾಗಿ ಗುರುತಿಸಲು ಆಗುವುದೇ ಇಲ್ಲ. ಹೀಗೆ ನೋಡಿದಾಗ ಸರ್ವಜ್ಞನು ಜಾನಪದ ಕವಿತೆ ರಚಿಸಿದ ಶಿಷ್ಟ ಸಾಹಿತಿಯೆಂದು ಗುರುತಿಸಬೇಕಾಗುತ್ತದೆ. ಅವನಿಗೆ ಜನವಾಣಿ ಬೇರು, ಅವನ ಕವಿವಾಣಿ ಆ ಗಿಡದಲ್ಲಿ ಅರಳಿದ ಹೂವು.

ಜಾನಪದ ಸಾಹಿತಿಯು ಜ್ಞಾನ ಕೃತಿಕಾರನಿರಬಾರದು. ಆ ಸಾಹಿತ್ಯವು ಹಳ್ಳಿಗಾಡಿನವರ ಮನಸ್ಸಿನ ನೇರವಾದ ಅಭಿವ್ಯಕ್ತಿಯಾಗಿರಬೇಕು. ಅದಕ್ಕೆ ಅಧಿಕೃತ ಪಾಠವಿರಬಾರದು, ಅದು ಸ್ಥಳೀಯ ಚೌಕಟ್ಟಿನೊಳಗೆ ಇರಬೇಕು, ಒಂದು ಪಂಥಕ್ಕೆ ಪಕ್ಷಪಾತಿಯಾಗಿರಬಾರದು. ಒಂದು ಸಮೂಹದ ಅಭಿವ್ಯಕ್ತಿಯಾಗಬೇಕು ಎಂದೆಲ್ಲ ಹೇಳಿದಾಗ ಬರೀ ಶ್ರಮಜೀವಿಗಳ ಹಾಡುಪಾಡಾದರೂ ಸರ್ವಜ್ಞನಲ್ಲಿದೆಯೆ ಎಂಬುದೂ ತರ್ಕದ ಮಾತು. ●

## ನೆಮ್ಮದಿಯೆಲ್ಲಿ?

ಕ್ರೋಧಕ್ಕೆ ಬಲಿಯಾಗಿ ದುರ್ಯೋಧನ  
ಗೈದ ಕೌರವರ ಕುಲನಾಶ.  
ವಿಭೀಷಣನ ಮಾತ ಕೇಳದೆ ರಾವಣ  
ಮಾಡಿಕೊಂಡ ಲಂಕಾಪಟ್ಟಣ ನಾಶ.  
ಶಾಂತಿಯೆಲ್ಲಿ? ನೆಮ್ಮದಿಯೆಲ್ಲಿ?  
ಕೇಳಿ ನಗುವನಯ್ಯಾ ಕೊತ್ತಲೇಶಾ.

## ಅಹಿಂಸೆ

ಮಹಾವೀರ ನಡೆದ ದಾರಿ ಅಹಿಂಸೆ  
ಬುದ್ಧ ಸಾಗಿದ ಹಾದಿ ಅಹಿಂಸೆ  
ಬಾಹುಬಲಿ ಹಿಡಿದ ಮಾರ್ಗ ಅಹಿಂಸೆ  
ಮಹಾತ್ಮಗಾಂಧಿ ತೋರಿದ ಬೆಳಕು ಅಹಿಂಸೆ  
ಅಹಿಂಸೆಯ ಸಂದೇಶವು  
ಹಿರಿದು ಮಾನವತೆಗೆ ಕೊತ್ತಲೇಶಾ.

## ಹೆಣ್ಣು

ಹೆಣ್ಣು ಕೆಲವರಿಗೆ ಮಹಾಮಾಯೆ  
ಇನ್ನು ಹಲವರಿಗೆ ಗುಪ್ತಗಾಮಿನಿ  
ಕೊತ್ತಲೇಶಾ, ನಿನಗೆ ಹೆಣ್ಣು ಮಹಾದೈವ!

-ಕೊತ್ತಲ ಮಹಾದೇವಪ್ಪ





# ಆಂಧ್ರಪ್ರದೇಶದಲ್ಲಿ ಅರವತ್ತಾರನೆಯ ಶಿವಾನುಭವ ಚಿಂತನೆ



ಆಂಧ್ರಪ್ರದೇಶದ ಆದವಾನಿಯ ಪೇಟೆ ವೀರಭದ್ರೇಶ್ವರ ಸ್ವಾಮಿಯ ದೇವಸ್ಥಾನದಲ್ಲಿ ೬೬ನೇ ಶಿವಾನುಭವ ಚಿಂತನೆ ಸಂದರ್ಭದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಆಂಧ್ರ ಘಟಕದ ಪತಿಯಿಂದ ಇತ್ತೀಚೆಗೆ ಆದವಾನಿಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ನೂತನ ಅಧ್ಯಕ್ಷರೂ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ವಿಜೇತರೂ, ಶರಣ ಸಾಹಿತ್ಯ ಪರಿಷತ್ತಿನ ಆಂಧ್ರ ಘಟಕದ ಪ್ರಧಾನ ಕಾರ್ಯದರ್ಶಿಗಳೂ ಮತ್ತು ಆದವಾನಿಯ ಕನ್ನಡ ಸಂಘದ ಅಧ್ಯಕ್ಷರೂ ಆದ ಶ್ರೀ ಬ.ರ. ದತ್ತಾತ್ರೇಯ ಗೌಡರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಆಂಧ್ರಘಟಕದ ಸದಸ್ಯರೂ ಆದವಾನಿಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ನೂತನ ನಿರ್ದೇಶಕರೂ ಆದ ಶ್ರೀ ಎಸ್.ಎಂ. ಶಿವಮೂರ್ತಿಸ್ವಾಮಿಗಳು ಹಾಗೂ ನದಿಚಾಗಿ ಗ್ರಾಮದ ಶರಣ ಶ್ರೀ ಅಮರೇಶಗೌಡರನ್ನು ಸನ್ಮಾನಿಸಲಾಯಿತು. ಕಾರ್ಯಕ್ರಮ ಅತ್ಯಂತ ಅಚ್ಚುಕಟ್ಟಾಗಿ ನೆರವೇರಿತು.

ಆದವಾನಿ ಕಲ್ಲುಮಠದ ಪೂಜ್ಯಶ್ರೀ ಚೋಳಬಸವ ಮಹಾಸ್ವಾಮಿಗಳು ಹಾಗೂ ಚೌಕಿಮಠದ ಪೂಜ್ಯಶ್ರೀ ಮರಿರಾಚೋಟಿ ಮಹಾಸ್ವಾಮಿಗಳು ಕಾರ್ಯಕ್ರಮದ ಸಾನ್ನಿಧ್ಯ ವಹಿಸಿದ್ದರು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಆಂಧ್ರಘಟಕದ ಅಧ್ಯಕ್ಷರಾದ ಶ್ರೀ ಕೋಸ್ಗಿ ರಾಮಲಿಂಗಪ್ಪನವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಆಂಧ್ರಘಟಕದ ಕಾರ್ಯದರ್ಶಿಗಳಾದ ಶ್ರೀ ಎಂ. ಆದಿಬಸವರಾಜ ಇವರು ಸ್ವಾಗತ ಮಾಡಿದರು. ಶ್ರೀ ಜಿ. ಗುರುಬಸವರಾಜ ಅವರು ಕಾರ್ಯಕ್ರಮ ನಿರ್ವಹಿಸಿದರು. ಶ್ರೀ ಸಾ.ಮ. ಬಸವರಾಜಯ್ಯನವರು ಸನ್ಮಾನಿತರ ಪರಿಚಯ ಮಾಡಿದರು.

ಶ್ರೀ ಜಿ.ಎಂ. ರುದ್ರಮುನಿಸ್ವಾಮಿ ಅವರು ವಂದನೆ ಸಲ್ಲಿಸಿದರು.

ವರದಿ : ಎಂ. ಆದಿಬಸವರಾಜ

ಹಿಂದೆ ಅಧಿಕಾರದಲ್ಲಿದ್ದವರು ಹಳೆಯದನ್ನು ಜಾರಿಗೆ ತರಲು ಅಪೇಕ್ಷಿಸುತ್ತಾರೆ. ಅಧಿಕಾರದಲ್ಲಿರುವವರು ಇದ್ದುದನ್ನು ನಡೆಸಿಕೊಂಡು ಹೋಗಬಯಸುತ್ತಾರೆ. ಇನ್ನೂ ಅಧಿಕಾರಕ್ಕೆ ಬರದಿರುವವರು ಬದಲಾವಣೆ ಬೇಕೆನ್ನುತ್ತಾರೆ.

-ಲೂರ್ಸಿ



ಶ್ರೀ ದತ್ತಾತ್ರೇಯ ಗೌಡರಿಂದ ಸನ್ಮಾನ ಸ್ವೀಕಾರ

# ತಾಲ್ಲೂಕು ಮಟ್ಟದ ಶರಣ ಸಮಾವೇಶ



ಶರಣ ಸಮಾವೇಶದ ಉದ್ಘಾಟನೆ

ಮೈಸೂರು ಜಿಲ್ಲಾ ಟಿ. ನರಸೀಪುರ ತಾಲ್ಲೂಕಿನ ಹೆಳವರಹುಂಡಿ ಗ್ರಾಮದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ತಾಲ್ಲೂಕು ಘಟಕದ ವತಿಯಿಂದ ತಾಲ್ಲೂಕು ಮಟ್ಟದ ಶರಣ ಸಮಾವೇಶ ಮತ್ತು 'ಮಠದಿಂದ ಮಠಕ್ಕೆ ಜಂಗಮ ಜ್ಯೋತಿ' ಕಾರ್ಯಕ್ರಮ ಇತ್ತೀಚೆಗೆ ನಡೆಯಿತು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಗೊ.ರು. ಚನ್ನಬಸಪ್ಪ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಸಾನ್ನಿಧ್ಯ ವಹಿಸಿದ್ದ ಪೂಜ್ಯಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮೀಜಿ ಅವರು ಆಶೀರ್ವಚನ ನೀಡಿ, ಮನುಷ್ಯನ ಬದುಕು ಸುಖವಾಗಬೇಕಾದರೆ ದುಡಿಮೆಯಲ್ಲೇ ಸಂತೃಪ್ತಿಪಟ್ಟುಕೊಳ್ಳುವಂಥ ಮನೋಭಾವನೆ ಬೆಳೆಸಿಕೊಳ್ಳಬೇಕು ಎಂದರು.



ಹೆಳವರಹುಂಡಿ ಶಾಲಾ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ

ಕಾರ್ಯಕ್ರಮವನ್ನು ಉದ್ಘಾಟಿಸಿದ ವಾಟಾಳು ಮಠದ ಪೂಜ್ಯಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮೀಜಿ ಮಾತನಾಡಿ ಇಂದು ಪಟ್ಟಣದಲ್ಲಿ ವಾಸಿಸುವ ಜನರಿಗೆ ನೆಮ್ಮದಿ ಇಲ್ಲದಂತಾಗಿದೆ. ಆದರೆ ಹಳ್ಳಿಗಳಲ್ಲಿ ಸಂತೃಪ್ತ ಜೀವನವಿದೆ. ಹಳ್ಳಿಗರು ಇದನ್ನು ಅರಿತು ಬದುಕಬೇಕೆಂದರು.

ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾಧ್ಯಕ್ಷರಾದ ಡಾ. ಎಸ್. ಶಿವರಾಜಪ್ಪ ಅವರು ಮಾತನಾಡಿ ಜನತೆ ಗುರುಗಳ ಮಾರ್ಗದರ್ಶನದಲ್ಲಿ ನಡೆದಾಗ ಮಾತ್ರ ಸ್ವಸ್ಥ ಸಮಾಜ ನಿರ್ಮಾಣಗೊಳ್ಳಲು ಸಾಧ್ಯ ಎಂದರು. ಹೆಳವರಹುಂಡಿ ಶಾಲಾ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.

ಕಾರ್ಯಕ್ರಮದಲ್ಲಿ ಮಾಡ್ರಳ್ಳಿ ಪೂಜ್ಯ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮೀಜಿ, ಶ್ರೀ ಶಿವಲಿಂಗ ದೇಶಿಕೇಂದ್ರ ಸ್ವಾಮೀಜಿ, ಶ್ರೀ ಶಿವಮೂರ್ತಿ ಸ್ವಾಮೀಜಿ ಮತ್ತಿತರ ಚರಮೂರ್ತಿಗಳು, ಮಮತಾ ಶಿವಪ್ರಸಾದ್, ಪಿ. ಶಿವಸ್ವಾಮಿ, ಚೌಹಳ್ಳಿ ಗುರುಮಲ್ಲಪ್ಪ, ಶರಣ ಸಾಹಿತ್ಯ ಪರಿಷತ್ತಿನ ಮಹಾಂತಪ್ಪ, ಪುಟ್ಟಬುದ್ಧಿ, ಸಿದ್ದಪ್ಪ, ರಾಜಶೇಖರ್, ಮಾದಪ್ಪ, ಪಿ. ನಟರಾಜು, ಪ್ರಕಾಶ್, ಹೆಚ್.ಎಸ್. ಶಿವಣ್ಣ ಮತ್ತು ಶಾಂತರಾಜು ಉಪಸ್ಥಿತರಿದ್ದರು.

ವರದಿ : **ಡಾ. ಎಸ್. ಶಿವರಾಜಪ್ಪ**

### ತೇಜನಿನದ

ಹಟ್ಟು ನಿರ್ವಾಣಕ್ಕೆ
ಬಟ್ಟೆಗಳು ಏಕೆಂದು
ಕಟ್ಟುಕಟ್ಟಳೆಯ ಕಿತ್ತಿಟ್ಟರೂ ಎನ್ನಕ್ಕ
ಕೆಟ್ಟ ಕಣ್ಗಳ ನೆಟ್ಟ ದೃಷ್ಟಿಗೆ ರಟ್ಟಾಗುವಂತೆ
ದಟ್ಟ ಕೇಶವ ಬಿಚ್ಚಿ ಮುಚ್ಚಿದಳು ತನುವ
ದಿಟ್ಟ ಶಿವಶರಣೆಯಾಗಿ ಶಿವಗೆ
ಬಿಚ್ಚಿದಳು ಮನವ, ತೇಜನಿನದ!

**-ಬಿ.ಎಸ್. ತೇಜಸ್ವಿನಿದೇವಿ ಅರಸ್**
ಬೆಂಗಳೂರು





ಧಾರವಾಡ ಜಿಲ್ಲೆ

# ಬಸವಣ್ಣನವರು ಆಗಮಿಕ ಶೈವಮೂಲದವರು

ವಚನಗಳಲ್ಲಿ, ಕಾವ್ಯಗಳಲ್ಲಿ ಬಸವಣ್ಣನವರು ಶೈವಬ್ರಾಹ್ಮಣ ಮೂಲದವರೆಂಬುದು ಸ್ಪಷ್ಟವಿದೆ. ಆದರೆ ಈವರೆಗೆ ಅನೇಕರು ಭಾವಿಸಿರುವಂತೆ ಅವರು ಶಂಕರಾಚಾರ್ಯರ ವೈದಿಕ ಶೈವಬ್ರಾಹ್ಮಣ ಮೂಲದವರಲ್ಲ, ಆಗಮಿಕ ಶೈವಬ್ರಾಹ್ಮಣ ಮೂಲದವರೆಂದು ಡಾ. ಎಂ.ಎಂ. ಕಲಬುರ್ಗಿಯವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಧಾರವಾಡ ಜಿಲ್ಲಾ ಘಟಕದ ಆಶ್ರಯದಲ್ಲಿ ಈಚೆಗೆ ಜರುಗಿದ "ಪದ್ಮಭೂಷಣ ಡಾ. ಎಂ.ಸಿ. ಮೋದಿ ದತ್ತಿ" ಉಪನ್ಯಾಸ ನೀಡುತ್ತ ಹೇಳಿದರು.



**ವೇದಿಕೆಯಲ್ಲಿ : ಡಾ. ಎಂ.ಎಂ. ಕಲ್ಬುರ್ಗಿ ಅವರಿಂದ ಉಪನ್ಯಾಸ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ಚಂದ್ರಕಾಂತ ಬೆಲ್ಲದ ಮತ್ತು ಜಿಲ್ಲಾ ಘಟಕದ ಅಧ್ಯಕ್ಷರಾದ ಡಾ. ಆರ್. ಎಫ್. ಪಾಟೀಲ.**

ಶಾಸನ, ಕಾವ್ಯ, ಸಿದ್ಧಾಂತ ಮೊದಲಾದ ಶಾಸ್ತ್ರಗಳು ಹೇಳುವಂತೆ ಪ್ರಾಚೀನ ಕರ್ನಾಟಕದಲ್ಲಿ ಪಾಶುಪತ, ನಕುಲೀಶ (ಕಾಳಾಮುಖ), ಮಹಾವ್ರತ (ಕಾಪಾಲಿಕ, ಸೋಮ), ಸಿದ್ಧಾಂತ (ಮಾಹೇಶ್ವರ, ಶ್ರೋತ್ರೀಯ, ಶುದ್ಧಶೈವ, ಆರಾಧ್ಯ) ಎಂಬ ನಾಲ್ಕು ಆಗಮಿಕ ಶೈವಗಳು ಅಸ್ತಿತ್ವದಲ್ಲಿದ್ದವು. ವೈದಿಕ ಶೈವರಂತೆ ಇವರೂ ತಮ್ಮನ್ನು ಬ್ರಾಹ್ಮಣರೆಂದೇ ಕರೆದುಕೊಳ್ಳುತ್ತಿದ್ದರು. ಇವುಗಳಲ್ಲಿ ಕೊನೆಯದಾದ ಸಿದ್ಧಾಂತ ಶೈವಬ್ರಾಹ್ಮಣವು ಹೆಚ್ಚು ವೇದಮುಖಿಯಾಗಿದ್ದಿತು. ಬಸವಣ್ಣನವರ ತಂದೆ ಮಾದಿರಾಜ, ಕೊಂಡುಗುಳಿ ಕೇಶರಾಜರಲ್ಲದೆ, ಕವಿ ಹರಿಹರ, ಮಗ್ಗೆಯ ಮಾಯಿದೇವ, ಮಹಾಲಿಂಗದೇವ ಮೊದಲಾದವರ ಪೂರ್ವಜರು ಈ ಸಿದ್ಧಾಂತ ಶೈವಬ್ರಾಹ್ಮಣ ಅಥವಾ ಆಗಮಿಕ ಶೈವ ಬ್ರಾಹ್ಮಣರಾಗಿದ್ದರೆಂದು ಶಾಸನ, ಕಾವ್ಯಗಳಿಂದ ಸ್ಪಷ್ಟಪಡಿಸಿದರು.

ತಂದೆ ಮಾದಿರಾಜನ ಈ ಬ್ರಾಹ್ಮಣ ಪರಂಪರೆಯವರೇ ೧೨ನೇ ಶತಮಾನದ ಬಳಿಕ ಅವನ ಮಗ ಬಸವಣ್ಣನ ಲಿಂಗಾಯತವನ್ನು ವೀರಶೈವವನ್ನಾಗಿ ಪರಿವರ್ತಿಸುತ್ತ ನಡೆದು, ೧೬ನೇ ಶತಮಾನದಲ್ಲಿ ಆಚಾರ್ಯ ಪೀಠ ಕಲ್ಪಿಸಿಕೊಂಡು ಪಂಚಾಚಾರ್ಯ ಪರಂಪರೆಯನ್ನು ಹುಟ್ಟುಹಾಕಿದರು. ತಾವು ಸಿದ್ಧಾಂತಶೈವ ಬ್ರಾಹ್ಮಣವಾದುದರಿಂದ ತಮ್ಮ ಧರ್ಮಗ್ರಂಥಕ್ಕೆ 'ಸಿದ್ಧಾಂತ ಶಿಖಾಮಣಿ' ಎಂದು ಹೆಸರಿಟ್ಟರು.

ಹೀಗೆ ಬಸವಣ್ಣನವರ ಲಿಂಗಾಯತದಲ್ಲಿ ಮಿಶ್ರವಾಗುವ ಅನಿವಾರ್ಯತೆಯ ಸಂದರ್ಭದಲ್ಲಿ ಈ ಸಿದ್ಧಾಂತಶೈವ ಬ್ರಾಹ್ಮಣರಲ್ಲಿ ಕೆಲವರು ತಮ್ಮ ಶ್ರೇಷ್ಠತೆ ಉಳಿಸಿಕೊಳ್ಳಲು ಶಂಕರನ ವೈದಿಕ ಅದ್ವೈತವನ್ನು ಸೇರಿದರು. ಬಹಳಷ್ಟು ಜನ ಮಿಕ್ಕ ಮೂರು ಶಾಖೆಗಳನ್ನೂ ಒಳಗು ಮಾಡಿಕೊಂಡು ಬಸವಣ್ಣನ ಲಿಂಗಾಯತದಲ್ಲಿ ಸೇರಿ ಇಂದಿನ ವೀರಶೈವ ಜಂಗಮರಾದರು. ೧೬ನೇ ಶತಮಾನದ ಹೊತ್ತಿಗೆ ಮೈಸೂರು ಭಾಗದಲ್ಲಿ ಕೆಲವರು ಆರಾಧ್ಯ ವೀರಶೈವ ಜಂಗಮರಾದರೆ, ಕೆಲವರು ಈ ಯಾವ ಗೋಜಿಗೂ ಹೋಗದೆ ಆರಾಧ್ಯ ಬ್ರಾಹ್ಮಣ ಹೆಸರಿನಲ್ಲಿ ಮೂಲ ಲಕ್ಷಣ ಉಳಿಸಿಕೊಂಡೇ ಮುಂದುವರಿದರು.

ಹೀಗೆ ಮೈಸೂರು ಪ್ರದೇಶದಲ್ಲಿ ಮುಂದುವರಿದ ಆರಾಧ್ಯ ಬ್ರಾಹ್ಮಣರು ಇಂದು ೧೨ ಸಾವಿರದಷ್ಟಿದ್ದು, ಇವರು ವೀರಶೈವರ ಮನೆಯಲ್ಲಿ ಊಟ ಮಾಡುವುದಿಲ್ಲ. ಜಗುಲಿಯ ಮೇಲೆ ಸ್ಥಾವರಲಿಂಗವಿಟ್ಟು ಪೂಜಿಸುತ್ತಾರೆ. ಜನಿವಾರ ಧರಿಸುತ್ತಾರೆ. ಗಾಯತ್ರಿ, ಪಂಚಾಕ್ಷರಿ ಎರಡೂ ಮಂತ್ರ ಜಪಿಸುತ್ತಾರೆ. ಲಿಂಗೋದ್ಭವ ರೇವಣಸಿದ್ಧ ಮೊದಲಾದ ಪಂಚಾಚಾರ್ಯರನ್ನು ಪೂಜಿಸುವರಾದರೂ ಪಂಚಪೀಠದ ಜಗದ್ಗುರುಗಳನ್ನು ಮನ್ನಿಸುವುದಿಲ್ಲ. ಇವರಲ್ಲಿ ವೈದಿಕರ ಕಶ್ಯಪಗೋತ್ರ, ಅಶ್ವಲಾಯನ ಸೂತ್ರ ಇತ್ಯಾದಿ ಗೋತ್ರ ಸೂತ್ರಗಳಿವೆಯೇ ಹೊರತು ಪಂಚಪೀಠಗಳು ಹೇಳುವ ವೀರಭದ್ರ, ಪಡಿವಿಡಿ ಇತ್ಯಾದಿ ಗೋತ್ರ ಸೂತ್ರಗಳಿಲ್ಲ. ಬಸವಣ್ಣನವರ ಕುಟುಂಬ ಇಂದು ಮೈಸೂರು ಪ್ರದೇಶದಲ್ಲಿರುವ ಈ ಆರಾಧ್ಯ ಬ್ರಾಹ್ಮಣ ಅಥವಾ ಆಗಮಿಕ ಬ್ರಾಹ್ಮಣಮೂಲಕ್ಕೆ ಸಂಬಂಧಿಸಿದುದೆಂದು ಡಾ. ಕಲಬುರ್ಗಿ ಪ್ರತಿಪಾದಿಸಿದರು.

ಆರಂಭದಲ್ಲಿ ಶ್ರೀ ಮರಡಿಮಠ ಅವರಿಂದ ಪ್ರಾರ್ಥನೆ, ಆರ್. ಎಫ್. ಪಾಟೀಲರಿಂದ ಸ್ವಾಗತ, ಸಿ.ವಿ. ಮುಳಗುಂದ ಅವರಿಂದ ಪರಿಚಯ, ವಿ.ಸಿ. ಚೌಶೆಟ್ಟಿ ಅವರಿಂದ ಮಾಲಾರ್ಪಣೆ, ಬಿ.ಜಿ. ಅಮ್ಮಣಗಿ ಅವರಿಂದ ಕಾರ್ಯಕ್ರಮ ನಿರೂಪಣೆ ಜರುಗಿದವು.

ಧಾರವಾಡ ಸಿದ್ಧರಾಮೇಶ್ವರ ಮಾರ್ಗದರ್ಶಿ ಸಭಾಭವನದಲ್ಲಿ ಜರುಗಿದ ಈ ಸಭೆಗೆ ಅನೇಕ ವಿದ್ವಾಂಸರೂ, ನಾಗರಿಕರೂ ಆಗಮಿಸಿದ್ದರು. ವೇದಿಕೆಯಲ್ಲಿ ಚಂದ್ರಕಾಂತ ಬೆಲ್ಲದ, ಡಾ. ಆರ್.ಎಫ್. ಪಾಟೀಲ ಆಸೀನರಾಗಿದ್ದರು. ಭಾಷಣದ ನಂತರ ಪ್ರಶ್ನೋತ್ತರ ನಡೆದು ಅನೇಕ ಹೊಸ ವಿಷಯಗಳು ಸಭೆಯ ಗಮನಕ್ಕೆ ಬಂದವು. ಇದೇ ಸಂದರ್ಭದಲ್ಲಿ ವಿದೇಶ ಪ್ರವಾಸದಿಂದ ಮರಳಿದ ಡಾ. ಕಲಬುರ್ಗಿ ಅವರನ್ನು ಸಿದ್ಧರಾಮೇಶ್ವರ ಮಾರ್ಗದರ್ಶಿ ಪರವಾಗಿ ರಾಜಶೇಖರ ವಸ್ತ್ರದ ಅವರು ಸನ್ಮಾನಿಸಿದರು.

ವರದಿ : **ಪ್ರೊ. ಚ.ವಿ. ಮುಳಗುಂದ**

ಬೆಂಗಳೂರು ಜಿಲ್ಲೆ



ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ದಿನಾಂಕ : ೧.೪.೦೫ರಂದು 'ಚೈತನ್ಯ ಸಂಜೆ'ಯಲ್ಲಿ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶಿವಕುಮಾರ ಸ್ವಾಮಿಗಳ ೯೮ನೆಯ ಜನ್ಮದಿನಾಚರಣೆ-ಜಿಲ್ಲಾ ಘಟಕದ ಅಧ್ಯಕ್ಷ ದಿಬ್ಬೂರು ಸಿದ್ಧಲಿಂಗಪ್ಪ ಅವರು ಮಾತನಾಡುತ್ತಿರುವುದು. ವೇದಿಕೆಯಲ್ಲಿ : ಸಿದ್ಧವೀರಪ್ಪ ಮತ್ತು ಘಟಕದ ಉಪಾಧ್ಯಕ್ಷ ಎಸ್. ಮರುಳಪ್ಪ

## ಜವಳಿ ಚಿಕ್ಕವೀರಪ್ಪ ನಂಜಮ್ಮ ದತ್ತಿ

ಬೆಂಗಳೂ ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಇತ್ತೀಚೆಗೆ ಏರ್ಪಡಿಸಿದ್ದ 'ಜವಳಿ ಚಿಕ್ಕವೀರಪ್ಪ ನಂಜಮ್ಮ ದತ್ತಿ' ಕಾರ್ಯಕ್ರಮದಲ್ಲಿ 'ಪ್ರಪಂಚ' ಪತ್ರಿಕೆಯ ಸಂಪಾದಕರೂ ಮಾಜಿ ರಾಜ್ಯಸಭಾ ಸದಸ್ಯರೂ ಆದ ನಾಡೋಜ ಡಾ. ಪಾಟೀಲ ಪುಟ್ಟಪ್ಪ ಅವರು 'ಬಸವಣ್ಣನವರ ಮಹಾ ಜೀವನ' ಎಂಬ ವಿಷಯ ಕುರಿತು ವಿಶೇಷೋಪನ್ಯಾಸ ನೀಡಿದರು.

ಜಗತ್ತಿನ ಮಹಾ ತತ್ವಜ್ಞಾನಿಗಳಲ್ಲಿ ಒಬ್ಬರಾದ ಬಸವಣ್ಣನವರು ನುಡಿದಂತೆ ನಡೆದ ಮಹಾನುಭಾವಿಗಳೆಂದು ಹೇಳಿದ ಪುಟ್ಟಪ್ಪನವರು "ಸಾಮಾಜಿಕ ವರ್ಗಭೇದಗಳನ್ನು ಅಳಿಸಿ ದಲಿತರು, ಬಡವರು ಮತ್ತು ಮಹಿಳೆಯರನ್ನು ಸಮಾಜದ ಪ್ರಧಾನ ವಾಹಿನಿಗೆ ತಂದು ಅವರ ಬದುಕಿಗೆ ಬೆಳಕು ನೀಡಿದ ಬಸವಣ್ಣನವರು ಮಹಾ ಜೀವನ" ಎಂದರು.

ಪ್ರಾಸ್ತಾವಿಕ ನುಡಿಗಳನ್ನಾಡಿದ ನಗರ ಜಿಲ್ಲಾ ಘಟಕದ ಅಧ್ಯಕ್ಷರಾದ ದಿಬ್ಬೂರು ಸಿದ್ಧಲಿಂಗಪ್ಪನವರು, ತಮ್ಮ ತಂದೆ ತಾಯಿಗಳ ಹೆಸರಿನಲ್ಲಿ ದತ್ತಿ ಸ್ಥಾಪಿಸಿದ ಡಾ. ಸಿ. ಸೋಮಶೇಖರ್ ದಂಪತಿಗಳಿಗೆ ಕೃತಜ್ಞತೆ ಅರ್ಪಿಸಿ, ನಗರ ಘಟಕದ ಚಟುವಟಿಕೆಗಳನ್ನು ವಿವರಿಸಿದರು.

ಆರಂಭದಲ್ಲಿ ಸ್ವಾಗತ ಭಾಷಣ ಮಾಡಿದ ಡಾ. ಸಿ. ಸೋಮಶೇಖರ್ ಅವರು, ಡಾ. ಪಾಟೀಲ ಪುಟ್ಟಪ್ಪ ಅವರನ್ನು 'ನಡೆದಾಡುವ ವಿಶ್ವಕೋಶ' ಎಂದು ಕರೆದು, ಅವರಿಂದ ಕನ್ನಡ ನಾಡು-ನುಡಿಗಳಿಗೆ ಸಂದಿರುವ, ಸಲ್ಲುತ್ತಿರುವ ಸೇವೆಯನ್ನು ಸ್ಮರಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಮಾಜಿ ವಿಧಾನ ಪರಿಷತ್ ಸದಸ್ಯರೂ, ಕ್ರಾಂತಿ ಕವಿಗಳೂ ಆದ ಡಾ. ಸಿದ್ಧಲಿಂಗಯ್ಯ ಅವರು ಮಾತನಾಡಿ, "ಬಸವಣ್ಣನವರು ೧೨ನೆಯ ಶತಮಾನದಷ್ಟು ಹಿಂದೆಯೇ ದಲಿತರಿಗೆ ದನಿ ಕೊಟ್ಟು, ಸಂಸ್ಕೃತದಿಂದ ಜನರನ್ನು ಕನ್ನಡದ ಕಡೆಗೆ ತಂದು, ಪುರೋಹಿತ ಶಾಹಿಯನ್ನು ಖಂಡಿಸಿದ ಮಹಾ ಸಮಾಜ ಸುಧಾರಕರು" ಎಂದು ಹೇಳಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಗೊ.ರು. ಚನ್ನಬಸಪ್ಪ ಅವರು ವಹಿಸಿದ್ದರು. ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಜಿ.ಪಿ. ಚಿಕ್ಕರಿಯಪ್ಪ ಸರ್ವರನ್ನು ವಂದಿಸಿದರು.

ವರದಿ : ಎಸ್. ಮರುಳಪ್ಪ







ಬೆಂಗಳೂರು ಜಿಲ್ಲೆ



'ಚಿಂತಾಮಣಿ ಲಲಿತಮ್ಮ ಚನ್ನಬಸವಾರಾಧ್ಯ ದತ್ತಿ' ಕಾರ್ಯಕ್ರಮ. ವೇದಿಕೆಯಲ್ಲಿ : ಯಜಮಾನ್ ಶ್ರೀಕಂಠಪ್ಪ, ದಿಬ್ಬೂರು ಸಿದ್ಧಲಿಂಗಪ್ಪ ಉಪನ್ಯಾಸ ನೀಡಿದ ಇಂದಿರಾ ಶಿವಣ್ಣ, ಕೆ.ವಿ.ವಿ.ಎನ್. ಸಂಸ್ಥೆಯ ಶಿವಣ್ಣ, ಗೊ.ರು.ಚ. ಮತ್ತು ಅ.ಭಾ. ಮಹಾಸಭಾ ಬೆಂಗಳೂರು ನಗರ ಜಿಲ್ಲಾ ಘಟಕಾಧ್ಯಕ್ಷ ಮಹಾರುದ್ರಪ್ಪ.



ಚೆನ್ನಯ್ಯಶೆಟ್ಟಿ ರುದ್ರಮ್ಮ ದತ್ತಿ ಉಪನ್ಯಾಸ : ವೇದಿಕೆಯಲ್ಲಿ : ದತ್ತಿ ದಾನಿ ಸಿ. ಸೋಮಶೇಖರ್, ಗೊ.ರು.ಚ., ಉಪನ್ಯಾಸ ನೀಡಿದ ಡಾ. ಸಿ. ವೀರಣ್ಣ, ಜಿಲ್ಲಾ ಘಟಕದ ಅಧ್ಯಕ್ಷ ದಿಬ್ಬೂರ್ ಸಿದ್ಧಲಿಂಗಪ್ಪ ಮತ್ತು ವಿಜಯನಗರ ವಿನಾಯಕ ಸೇವಾ ಸಮಿತಿಯ ಮಹಾದೇವಪ್ಪ ಉಪನ್ಯಾಸ ವಿಷಯ : ವೈಜ್ಞಾನಿಕ ಮನೋಭಾವದ ಅಗತ್ಯ





ಎರ್ರಿಸ್ವಾಮಿ ಮಠದಲ್ಲಿ ಗುಬ್ಬಿ ಹುಚ್ಚಪ್ಪ ಶಿವಶಂಕರ್ ದತ್ತಿ ಕಾರ್ಯಕ್ರಮ. ವೇದಿಕೆಯಲ್ಲಿ : ದತ್ತಿ ದಾನಿ ರವಿಶಂಕರ್, 'ಬಸವಣ್ಣ ಮತ್ತು ಕುವೆಂಪು ಅವರ ವಿಚಾರಗಳು' ಕುರಿತು ಉಪನ್ಯಾಸ ನೀಡಿದ ಆರ್. ಜಿ. ಹಳ್ಳಿ ನಾಗರಾಜ್, ನಿವೃತ್ತ ಹಿರಿಯ ಅಧಿಕಾರಿಗಳಾದ ಬಿ.ಜಿ. ರುದ್ರಪ್ಪ ಮತ್ತು ದಿಬ್ಬೂರ್ ಸಿದ್ಧಲಿಂಗಪ್ಪ

### ವಿದ್ಯಾರ್ಥಿ ನಿಲಯಕ್ಕೆ ಕೊಡುಗೆ



ಚಿಂತಾಮಣಿ ಲಲಿತಮ್ಮ ಚನ್ನಬಸವಾರಾಧ್ಯ ದತ್ತಿ ಕಾರ್ಯಕ್ರಮ ಸಂದರ್ಭದಲ್ಲಿ ಯಜಮಾನ್ ನಾಗಪ್ಪ ನಂಜಮ್ಮ ವಿದ್ಯಾರ್ಥಿನಿ ನಿಲಯಕ್ಕೆ ದಿಬ್ಬೂರ್ ವೀರಪ್ಪ ನಂಜಮ್ಮ ಎಂಡೋಮೆಂಟ್ ಟ್ರಸ್ಟ್‌ನಿಂದ ನೀರಿನ ಶುದ್ಧೀಕರಣ ಸಾಧನದ ಕೊಡುಗೆ. ಚಿತ್ರದಲ್ಲಿ : ಯಜಮಾನ್ ಶ್ರೀಕಂಠಪ್ಪ, ದಿಬ್ಬೂರ್ ಸಿದ್ಧಲಿಂಗಪ್ಪ, ಶಿವಣ್ಣ ಮತ್ತು ಗೊ.ರು.ಚ.



## ಮೈಸೂರು ಜಿಲ್ಲೆ



ಮೈಸೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು-ರಮಣಶ್ರೀ ಪ್ರತಿಷ್ಠಾನ ದತ್ತಿ ಉಪನ್ಯಾಸ. ವೇದಿಕೆಯಲ್ಲಿ : 'ವಚನಗಳಲ್ಲಿ ವಿಡಂಬನೆ' ಕುರಿತು ಉಪನ್ಯಾಸ ಮಾಡಿದ ಪ್ರೊ. ಎಂ. ಕೃಷ್ಣೇಗೌಡ, ಘಟಕದ ಅಧ್ಯಕ್ಷ ಗೊ.ರು. ಪರಮೇಶ್ವರಪ್ಪ, ಅಧ್ಯಕ್ಷತೆ ವಹಿಸಿದ್ದ ಆಂದೋಲನ ಪತ್ರಿಕೆ ಸಂಪಾದಕರಾದ ರಾಜಶೇಖರ ಕೋಟಿ ಮತ್ತು ದತ್ತಿ ದಾನಿ ಎಸ್. ಷಡಕ್ಷರಿ. ಪ್ರಾರ್ಥನೆ-ಕುಮಾರಿ ಚೂಡಾಮಣಿ, ಸ್ವಾಗತ-ಆರ್.ಎನ್. ದಿನೇಶ್, ಪರಿಚಯ-ಪ್ರೊ. ಬಿ.ಎಸ್. ಸದಾಶಿವ ಮೂರ್ತಿ, ವಂದನಾರ್ಪಣೆ-ನೀಲಾಂಬಿಕಾ ಮತ್ತು ನಿರ್ವಹಣೆ-ರಾಧಾ ನೀಲಕಂಠ



ಡಾ. ಹೆಚ್.ಪಿ. ಮಲ್ಲೇದೇವರ ದತ್ತಿ ಉಪನ್ಯಾಸ-ವೇದಿಕೆಯಲ್ಲಿ : ದತ್ತಿ ಉಪನ್ಯಾಸ ನೀಡಿದ ಸಿ.ಪಿ. ಕೃಷ್ಣಕುಮಾರ್, ಘಟಕಾಧ್ಯಕ್ಷ ಗೊ.ರು. ಪರಮೇಶ್ವರಪ್ಪ, ಅಧ್ಯಕ್ಷತೆ ವಹಿಸಿದ್ದ ಪ್ರೊ. ಕೆ.ಬಿ. ಪ್ರಭುಪ್ರಸಾದ್ ಮತ್ತು ದತ್ತಿ ದಾನಿ ಪ್ರೊ. ಜಗದಾಂಬಾ ಮಲ್ಲೇದೇವರು. ಪ್ರಾರ್ಥನೆ-ಸುಗಂಧ ಜಯಪ್ಪ, ಪರಿಚಯ-ಪ್ರೊ. ಪ್ರೇಮಲೀಲಾ ಮಲ್ಲಣ್ಣ, ವಂದನಾರ್ಪಣೆ-ಎಂ.ಎಸ್. ಉಗ್ರಪ್ಪ, ನಿರ್ವಹಣೆ-ಕಲ್ಯಾಣಿ ನಟರಾಜ್



ಡಾ. ಹೆಚ್. ಚೆನ್ನರುದ್ರಸ್ವಾಮಿ ಸ್ಮಾರಕ ದತ್ತಿ ಕಾರ್ಯಕ್ರಮ. ವೇದಿಕೆಯಲ್ಲಿ : ಡಾ. ಪ್ರಧಾನ ಗುರುದತ್, ಘಟಕಾಧ್ಯಕ್ಷ ಗೊ.ರು. ಪರಮೇಶ್ವರಪ್ಪ, ಅಧ್ಯಕ್ಷತೆ ವಹಿಸಿದ್ದ ಮ.ಗು. ಸದಾನಂದಯ್ಯ ಮತ್ತು ದತ್ತಿ ದಾನಿಗಳಾದ ಶ್ರೀಮತಿ ಗೌರಮ್ಮ ತಿಪ್ಪೇರುದ್ರಸ್ವಾಮಿ. ಪ್ರಾರ್ಥನೆ-ಶಾಂತಾ ಜಗದೀಶ್, ಸ್ವಾಗತ-ಎಸ್.ಜಿ. ಶಿವಶಂಕರ್, ಪರಿಚಯ-ಡಾ. ರು. ನಟರಾಜ್, ವಂದನಾರ್ಪಣೆ-ಬಿ.ಪಿ. ಪರಮೇಶ್ವರ, ನಿರ್ವಹಣೆ-ಬಿ. ಚನ್ನಬಸಪ್ಪ

## ಕೊಪ್ಪಳ ಜಿಲ್ಲೆ



ಕೊಪ್ಪಳ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು-ಶ್ರೀ ಮಹೇಶ್ವರ ಸೇವಾ ಸಮಿತಿ ದತ್ತಿ ಕಾರ್ಯಕ್ರಮ. ಹೊಸಪೇಟೆ ವಿಜಯನಗರ ಕಾಲೇಜಿನ ಪ್ರೊ. ಎಸ್. ಶಿವಾನಂದ ಅವರಿಂದ 'ಶರಣ ಮರುಳಶಂಕರದೇವ, ಉಪನ್ಯಾಸ. ವೇದಿಕೆಯಲ್ಲಿ : ಜಿಲ್ಲಾ ಘಟಕಾಧ್ಯಕ್ಷ ಡಾ. ಆರ್.ಎಂ. ಪಾಟೀಲ, ದೇವಸ್ಥಾನ ಸಮಿತಿ ಅಧ್ಯಕ್ಷ ಹುಲ್ಲತ್ತಿ ಚಂದ್ರಪ್ಪ ಮತ್ತು ಅಧ್ಯಕ್ಷತೆ ವಹಿಸಿದ್ದ ಪ್ರೊ. ಎಲ್.ಎಫ್. ಪಾಟೀಲ.



ಕ್ಷೇತ್ರವಾರ್ತೆ

## ಹಾವೇರಿ ಜಿಲ್ಲೆ




ಹಾವೇರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು : ರಾಣೆಬೆನ್ನೂರಿನಲ್ಲಿ ಡಾ. ಡಿ.ವಿ. ಲಕ್ಷ್ಮಣರಾವ್ ದತ್ತಿ ಕಾರ್ಯಕ್ರಮ ಮತ್ತು ಕದಳಿ ವೇದಿಕೆಯ ಮಾಸಿಕ ಗೃಹಗೋಷ್ಠಿ. ಪೂಜ್ಯಶ್ರೀ ಚನ್ನಬಸವ ಸ್ವಾಮೀಜಿ ಅವರ ಸಾನ್ನಿಧ್ಯ. ವೇದಿಕೆಯಲ್ಲಿ : ಶಕುಂತಲಮ್ಮ ಜಂಬಗಿ ಮತ್ತು ಸುವರ್ಣಾದೇವಿ ಪಾಟೀಲ.

ವರದಿ : ಹನುಮಂತಗೌಡ ಗೌಲ್ಲರ



ಹಾವೇರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು- ಸಿದ್ಧಣ್ಣ ಚಾಶೆಟ್ಟಿ ದತ್ತಿ ಕಾರ್ಯಕ್ರಮ ಮತ್ತು ಕದಳಿ ವೇದಿಕೆ ಗೃಹಗೋಷ್ಠಿ. ಪೂಜ್ಯ ಶ್ರೀ ಶಂಭುಲಿಂಗ ಪಟ್ಟಾಧ್ಯಕ್ಷರಿಂದ ಉದ್ಘಾಟನೆ. ಜಿಲ್ಲಾ ಘಟಾಕಾಧ್ಯಕ್ಷ ಹನುಮಂತಗೌಡ ಗೊಲ್ಲರ, ಸಿದ್ಧಣ್ಣ ಚೌಶೆಟ್ಟಿ, ಸೋಮಣ್ಣ ಆಣೂರಶೆಟ್ಟರ, ಬಿ.ಕೆ. ಲೀಲಾಜಿ, ವೇದಿಕೆ ಜಿಲ್ಲಾಧ್ಯಕ್ಷೆ ಬಸಮ್ಮ ಹಳಕೊಪ್ಪ

ವರದಿ : ಹನುಮಂತಗೌಡ ಗೊಲ್ಲರ

## ಕೊಪ್ಪಳ ಜಿಲ್ಲೆ



ಕೊಪ್ಪಳ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು-ವೀರಣ್ಣ ಬಳ್ಳಾಬಳ್ಳಿ ಅವರ ಮರಿಶಾಂತವೀರ ನಿಲಯದಲ್ಲಿ ೧೫ನೆಯ 'ಮನೆಯಲ್ಲಿ ಮಹಾಮನೆ' ಕಾರ್ಯಕ್ರಮ. ಸಾನ್ನಿಧ್ಯ ವಹಿಸಿದ್ದ ಪೂಜ್ಯಶ್ರೀ ಗವಿಸಿದ್ಧೇಶ್ವರ ಮಹಾಸ್ವಾಮಿಗಳಿಂದ ಆಶೀರ್ವಚನ. ವೇದಿಕೆಯಲ್ಲಿ : ಪ್ರೊ. ಎ.ಬಿ. ಹಿರೇಮಠ, ಟಿ.ವಿ. ಮಾಗಳದ ಮತ್ತು ಮಹಾಲಿಂಗಯಾಳಗಿ

ವರದಿ : ಹನುಮಂತಪ್ಪ ಅಂಡಗಿ




ಕೊಪ್ಪಳ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು- ಕೆ.ಎಂ. ಶಿವಶಂಕರ್ ದತ್ತಿ ಕಾರ್ಯಕ್ರಮ : 'ಅಕ್ಕಮ್ಮನ ವಚನಗಳು' ಕುರಿತ ಉಪನ್ಯಾಸ ಮಾಡಿದ ಪ್ರೊ. ಚಂದ್ರಶೇಖರ ವಸ್ತ್ರದ, ಲಯನ್ಸ್ ಮಾಜಿ ಗೌರ್ನರ್ ಚಂಪಾಲಾಲ ಮೆಹ್ತಾ, ಜಿಲ್ಲಾ ಘಟಕಾಧ್ಯಕ್ಷ ಡಾ. ಆರ್.ಎಂ. ಪಾಟೀಲ ಮತ್ತು ಎಂ.ಎಸ್. ಸವದತ್ತಿ

ವರದಿ : ಡಾ. ಆರ್.ಎಂ. ಪಾಟೀಲ

## ಧಾರವಾಡ ಜಿಲ್ಲೆ



ದತ್ತಿ ಕಾರ್ಯಕ್ರಮ : ಧಾರವಾಡ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಬಸವತತ್ವ ಪ್ರಸಾರ ಸಂಸ್ಥೆಗಳ ಆಶ್ರಯದಲ್ಲಿ ಸುತ್ತೂರು ಜಗದ್ಗುರು ಶ್ರೀ ಇಮ್ಮಡಿ ಸಿದ್ಧಮಲ್ಲ ಶಿವಾಚಾರ್ಯ ದತ್ತಿ ಉಪನ್ಯಾಸ : ವೇದಿಕೆಯಲ್ಲಿ : ಶಿವಣ್ಣಾ ಬೆಲ್ಲದ, ಚಂದ್ರಣ್ಣ ಶಿರಹಟ್ಟಿ, ಜಿಲ್ಲಾ ಘಟಕದ ಅಧ್ಯಕ್ಷ ಡಾ. ಆರ್.ಎಫ್. ಪಾಟಲ ಬಿ.ಎಂ. ಹನುಮನಾಳ ಮತ್ತು ದಾಸೋಹಿ ಬಸವರಾಜ ಅಮ್ಮಣಗಿ ದಂಪತಿಗಳು.

ಸ್ಥಳ : ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ಉಪನ್ಯಾಸಕರು : ಡಾ. ಶಿವಾನಂದ

ವಿಷಯ : ಮೇದಾರ ಕೇತಯ್ಯ

ವರದಿ : ಪ್ರೊ. ಚ.ವಿ. ಮುಳಗುಂದ

## ಗುಲ್ಬರ್ಗ ಜಿಲ್ಲೆ




ದತ್ತಿ ಉಪನ್ಯಾಸ : ಗುಲ್ಬರ್ಗ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಶ್ರೀ ಸುತ್ತೂರು ಜಗದ್ಗುರು ಶ್ರೀ ಭಂಡಾರಿ ಬಸವಪ್ಪ ಒಡೆಯರ ದತ್ತಿ ಕಾರ್ಯಕ್ರಮ. ಜಿಲ್ಲಾ ಘಟಕದ ಅಧ್ಯಕ್ಷ ಪ್ರೊ. ಎಸ್.ಜಿ. ಮೇಳಕುಂದಿ ಅವರಿಂದ ಪ್ರಾಸ್ತಾವಿಕ ಭಾಷಣ. ವೇದಿಕೆಯಲ್ಲಿ : ಕೊಂಡಗುಳಿ ಕೇಶೀರಾಜನನ್ನು ಕುರಿತು ಉಪನ್ಯಾಸ ನೀಡಿದ ಡಾ. ಎಸ್.ಎಂ. ಹಿರೇಮಠ.

ವರದಿ : ಪ್ರೊ. ಎಸ್.ಜಿ. ಮೇಳಕುಂದಿ

## ಕೊಡಗು ಜಿಲ್ಲೆ




ಕೊಡಗು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು - ಕೊಡ್ಲಿಪೇಟೆಯಲ್ಲಿ ಗಂಗಾ ವೀರಶೈವ ಮಹಿಳಾ ಸಮಾಜದ ಸಹಯೋಗದೊಂದಿಗೆ ನಡೆಸಿದ ದತ್ತಿ ಉಪನ್ಯಾಸ ಕಾರ್ಯಕ್ರಮ. ವೇದಿಕೆಯಲ್ಲಿ : ಶ್ರೀ ಸಿ.ಪಿ. ವೀರಭದ್ರಪ್ಪ, ಜಿ.ಎನ್. ಮುರುಗೇಂದ್ರಪ್ಪ, ಜಿಲ್ಲಾ ಘಟಕದ ಅಧ್ಯಕ್ಷ ಎ.ಪಿ. ಶಂಕರಪ್ಪ, ಗೀತಾ ದಯಾಶಂಕರ್ ಸ್ವಾಗತಿಸಿದರು. ತೇಜೋವತಿ ವಂದಿಸಿದರು.

ವರದಿ : ಎ.ಪಿ. ಶಂಕರಪ್ಪ







## ದಾವಣಗೆರೆ ಜಿಲ್ಲೆ



ದಾವಣಗೆರೆ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಚಿಕ್ಕೋಳ್ ಈಶ್ವರಪ್ಪ ಅವರ ಧರ್ಮಪತ್ನಿ ಲಿಂ. ಶರಣೆ ಸಿ.ಈ. ಜಯಮ್ಮ ಅವರ ಸ್ಮರಣೆಗಾಗಿ ಹಿರೇಕೋಗಲೂರಿನಲ್ಲಿ ಏರ್ಪಡಿಸಿದ್ದ ಸರ್ವಶರಣ ಸಮ್ಮೇಳನ ಹಾಗೂ ೧೬ನೇ ಮಾಸಿಕ ಮಹಾಮನೆ ಕಾರ್ಯಕ್ರಮ. ವೇದಿಕೆಯಲ್ಲಿ : ಎಂ. ವಿರೂಪಾಕ್ಷಪ್ಪ, ದಾವಣಗೆರೆ ವಿರಕ್ತ ಮಠದ ಶ್ರೀ ಬಸವಜಯ ಮೃತ್ಯುಂಜಯಸ್ವಾಮಿಗಳು, ಸಾಣೆಹಳ್ಳಿ ಮಠದ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು, ಪಾಂಡೋಮಟ್ಟಿ ವಿರಕ್ತ ಮಠದ ಶ್ರೀ ಗುರುಬಸವಸ್ವಾಮಿಗಳು, ಗೊ.ರು. ಚನ್ನಬಸಪ್ಪ (ಮಾತನಾಡುತ್ತಿರುವವರು) ಹಾಗೂ ಚಿಕ್ಕೋಳ್ ಈಶ್ವರಪ್ಪ.

## ಬಳ್ಳಾರಿ ಜಿಲ್ಲೆ




### ದತ್ತಿ ಉಪನ್ಯಾಸ

ಬಳ್ಳಾರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು- ಭೋಗಪ್ಪ ನಂಜಮ್ಮ ದತ್ತಿ ಕಾರ್ಯಕ್ರಮ-ಎನ್. ಬಸವರಾಜ ಅವರಿಂದ 'ಸರ್ವಜ್ಞನ ಸಾರ್ವತ್ರಿಕ ಸಂದೇಶ' ಉಪನ್ಯಾಸ. ವೇದಿಕೆಯಲ್ಲಿ : ಆರ್.ಎಲ್. ಜಾದವ್ ಮತ್ತು ಜಿಲ್ಲಾ ಘಟಕಾಧ್ಯಕ್ಷ ಕೆ.ಬಿ. ಸಿದ್ಧಲಿಂಗಪ್ಪ

ವರದಿ : ಕೆ.ಬಿ. ಸಿದ್ಧಲಿಂಗಪ್ಪ







## ಪರಿಷತ್ತಿನ ಪ್ರಕಟಣೆಗಳು

| | | ರೂ.ಗಳು |
|---|---|---|
| 1. | ವಚನ ಸಾಹಿತ್ಯ | 50.00 |
| 2. | ವಚನ ವಾಙ್ಮಯ ಮತ್ತು ಭಾಷೆ | 50.00 |
| 3. | ವಚನ ಸಾಹಿತ್ಯ ಮತ್ತು ಮಹಿಳೆ | 50.00 |
| 4. | ಅಕ್ಕಮಹಾದೇವಿ | 50.00 |
| 5. | ಶಿವಯೋಗಿ ಸಿದ್ಧರಾಮ | 50.00** |
| 6. | ಚನ್ನಬಸವಣ್ಣ | 50.00** |
| 7. | ಫ.ಗು. ಹಳಕಟ್ಟಿ | 25.00** |
| 8. | ಶರಣರು ಮತ್ತು ಸಂತರು | 30.00** |
| 9. | ಕದಳಿ ಬನ (ವಚನ ಸಂಗ್ರಹ) | 10.00 |
| 10. | ಅನುಭವ ಮಂಟಪ (ಇಂಗ್ಲಿಷ್, ಹಿಂದಿ, ತೆಲುಗು, ಕನ್ನಡ, ತಮಿಳು) ತಲಾ | 10.00 |
| 11. | Dimensions of Bhakti Movement in India | 200.00 |
| 12. | ವೀರಶೈವ ದೀಪ್ತಿ : ಸಾಹಿತ್ಯ ಚಿಂತನ | 100.00 |
| 13. | ವೀರಶೈವ ದೀಪ್ತಿ : ಗೋಷ್ಠಿಚಿಂತನ | 20.00 |
| 14. | ವೀರಶೈವ ದೀಪ್ತಿ : ತತ್ವಚಿಂತನ | 30.00** |
| 15. | Veerashaiva Deepti | 25.00 |
| 16. | ಶರಣ ಕಿರಣ | 50.00 |
| 17. | ಲದ್ದೆಯ ಸೋಮಣ್ಣ | 15.00 |
| 18. | ಜೇಡರ ದಾಸಿಮಯ್ಯ | 50.00 |
| 19. | ಸ್ವರ ವಚನಗಳು | 60.00 |
| 20. | ಬೆಂಗಳೂರು ನಗರದ ವೀರಶೈವ ಮಠಗಳು | 400.00 |
| 21. | Western Scholars on Basaveshwara | 40.00 |
| 22. | ಶರಣ ತತ್ವಚಿಂತನ-4 (ಚಿಕ್ಕಮಗಳೂರು ಸಮ್ಮೇಳನದ ಪ್ರಬಂಧಗಳ ಸಂಕಲನ) | 75.00 |
| 23. | ಶರಣ ತತ್ವಚಿಂತನ-5 (ಬೆಳಗಾಂ ಸಮ್ಮೇಳನದ ಪ್ರಬಂಧಗಳ ಸಂಕಲನ) | 100.00 |
| 24. | ಶರಣ ತತ್ವಚಿಂತನ-6 (ರಾಯಚೂರು ಸಮ್ಮೇಳನದ ಪ್ರಬಂಧಗಳ ಸಂಕಲನ) | 100.00 |
| 25. | ಶರಣ ತತ್ವಚಿಂತನ-7 (ಬಾಗಲಕೋಟೆ ಸಮ್ಮೇಳನದ ಪ್ರಬಂಧಗಳ ಸಂಕಲನ) | 120.00 |
| 26. | ಜನದನಿ | 60.00 |
| 27. | ಶರಣ ಪ್ರಸಂಗ | 20.00 |
| 28. | ಜಾನಪದ ಸಾಹಿತ್ಯದಲ್ಲಿ ಶರಣರು | 20.00 |
| 29. | ಶೂನ್ಯ ಸಂಪಾದನೆ : ಚಿಂತನೆ-ಮರುಚಿಂತನೆ | 200.00 |
| 30. | ಶರಣ ರೇಖೆ | 30.00 |
| 31. | ಸರ್ವಜ್ಞನ ವಚನಗಳು - ಒಂದು ಜಾನಪದೀಯ ಅಧ್ಯಯನ | 100.00 |
| 32. | ಶರಣುಬನ್ನಿ ಜಲಕಾಯಕಕೆ | 30.00 |
| 33. | ಸುರಿಹೊಂಡ ಭರತಖಂಡ | 30.00 |
| 34. | ಸ್ಮರಣೀಯರು | 200.00 |
| 35. | ಗ್ರಾಮರಾಜ್ಯ | 50.00 |
| 36. | Sharana Vani-Gurubani | 50.00 |
| 37. | ಹರಿಹರನ ರಗಳೆಗಳಲ್ಲಿ ಭಕ್ತಿ | 50.00 |
| 38. | ಜಗದಗಲ ಮುಗಿಲಗಲ (ಧ್ವನಿ ಸುರುಳಿ) | 35.00 |
| 39. | ಶರಣವಾಹಿನಿ (ಸಿ.ಡಿ.) | 250.00 |

** ಪ್ರತಿಗಳು ಮುಗಿದಿವೆ.

ಪುಸ್ತಕಗಳು ದೊರೆಯುವ ಸ್ಥಳ :

**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**

ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦

MAHAMANE

Magazine Registration No. RNI 68294/97 -
Postal Registration No. CPMG/KA/BGS - 167/2003-05
Posted at Jayanagar H.P.O. on 5th of every month

May - 2005

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.)

ಮೈಸೂರು

## ಸದಸ್ಯತ್ವ ವಿವರ

| | |
|---|---|
| ಮಹಾಪೋಷಕರು | - 5000 ರೂ. |
| ಪೋಷಕರು | - 3000 ರೂ. |
| ದಾತೃಗಳು | - 1000 ರೂ. |
| ಆಜೀವ | - 300 ರೂ. |
| ವಾರ್ಷಿಕ | - 30 ರೂ. |

## ಸದಸ್ಯ ಸಂಸ್ಥೆಗಳು

| | |
|---|---|
| ಪೋಷಕ | - 2000 ರೂ. |
| ಆಜೀವ | - 1000 ರೂ. |
| ವಾರ್ಷಿಕ | - 100 ರೂ. |

## ಮಹಾಮನೆ ಜಾಹಿರಾತು ದರ

| | |
|---|---|
| ರಕ್ಷಾಪುಟ - 4 | ರೂ. 5,000 |
| ರಕ್ಷಾಪುಟ - 2 ಅಥವಾ 3 | ರೂ. 3,000 |
| ಒಳಪುಟ - ವಿಶೇಷ | ರೂ. 2,000 |
| ಒಳಪುಟ ಸಾಧಾರಣ | ರೂ. 1,000 |
| ಅರ್ಧಪುಟ | ರೂ. 600 |

## ಮಹಾಮನೆ ಚಂದಾದಾರರ ಗಮನಕ್ಕೆ

'ಮಹಾಮನೆ'ಗೆ ವಾರ್ಷಿಕ ಸದಸ್ಯರಾದವರು ದಯವಿಟ್ಟು ಸಕಾಲದಲ್ಲಿ ತಮ್ಮ ಸದಸ್ಯತ್ವವನ್ನು ನವೀಕರಿಸಿ ಸಹಕರಿಸಬೇಕಾಗಿ ವಿನಂತಿ. ಸದಸ್ಯತ್ವದ ಅವಧಿ ಮುಗಿದ ಮೇಲೂ 'ಮಹಾಮನೆ' ನಿಮ್ಮ ಮನೆಗೆ ಬರುವುದು ಕಷ್ಟವಾಗುತ್ತದೆ.

ನಿಮ್ಮ ಚಂದಾ ಅವಧಿ ಮುಗಿಯುವ ದಿನಾಂಕವನ್ನು 'ಮಹಾಮನೆ'ಯ ಲಕೋಟೆಯ ಮೇಲಿರುವ ನಿಮ್ಮ ವಿಳಾಸದ ಮೇಲೆ ಕಾಣಿಸಿದೆ. ದಯವಿಟ್ಟು ಗಮನಿಸಿ.

ವರ್ಷಕೊಮ್ಮೆ 100ರೂ. ಕಳುಹಿಸುವುದು ನಿಮ್ಮ ಕಾರ್ಯಭಾರದಲ್ಲಿ ಮರೆತುಹೋಗಿ ಬಿಡಬಹುದು. ಅದಕ್ಕೆ ಬದಲಾಗಿ ಒಮ್ಮೆಗೇ 500 ರೂ. ಕಳುಹಿಸಿ ಆಜೀವ ಸದಸ್ಯತ್ವ ಪಡೆದರೆ ನಮಗೆ ಮತ್ತು ನಿಮಗೆ ಇಬ್ಬರಿಗೂ ಅನುಕೂಲ.

ದಯವಿಟ್ಟು ಸಹಕರಿಸಿ.

- ಪ್ರಕಾಶಕರು.

ಜಾಹಿರಾತುಗಳ ಸಾಹಿತ್ಯ ಮತ್ತು ಶುಲ್ಕವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಕಳುಹಿಸಬಹುದು. ಕ್ರಾಸ್ ಮಾಡಿದ ಡಿ.ಡಿ. ಅಥವಾ ಮನಿ ಆರ್ಡರ್ ಮೂಲಕ "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ಮಹಾಮನೆ)" ಈ ಹೆಸರಲ್ಲಿ ಕಳುಹಿಸಬೇಕು.

- ಸಂಪಾದಕರು

---

ಗೆ,

.......................................................................................................

.......................................................................................................

.......................................................................................................

.......................................................................................................



Published by : **Akhila Bharatha Sharana Sahithya Parishat (Regd.)**
1st Main, Shivarathrishwara Cricle, 8th Block, Jayanagar, Bangalore - 560 070
Printed by : **Lakshmi Mudranalaya,** 5th Main, Chamarajpet, Bangalore - 560 018
Editors : **M.G. Nagaraj and H.S. Siddagangappa**